ಜುಲೈ – 2020

## ಲೇಖನಗಳು






**ವಿನ್ಯಾಸ**
ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**
ಸೂರಜ್ ರೇವಾಡಿಗರ್

**ಪರಿಷ್ಕರಣೆ**
ಮುರಳಿ ಎಸ್.
ಅನನ್ಯರೂಪ

**ಕರಡು ತಿದ್ದುಪಡಿ**
ಡಾ.ದೀಪಕ್ ಬಿ., ಮೈಸೂರು

# ಕವಳೆ

**ಸಾಮಾನ್ಯ ಹೆಸರು :** Wild guava

**ವೈಜ್ಞಾನಿಕ ಹೆಸರು :** *Careya arborea*



© ನಾಗೇಶ್ ಓ. ಎಸ್. ಕವಳೆ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಕವಳೆ ಸಾಮಾನ್ಯ ಗಾತ್ರದ ಮರ. ಸುಮಾರು ಇಪ್ಪತ್ತು ಮೀಟರ್ ಎತ್ತರಕ್ಕೆ ಬೆಳೆಯಬಲ್ಲ ಈ ಮರ ಭಾರತ, ಇಂಡೋನೇಷಿಯಾ ಮತ್ತು ಶ್ರೀಲಂಕಾ ದೇಶಗಳ ಎಲೆ ಉದುರುವ ಕಾಡುಗಳಲ್ಲಿ ಸಾಮಾನ್ಯವಾಗಿ ಕಾಣಸಿಗುತ್ತವೆ. ಒರಟಾದ ಬೂದು ಬಣ್ಣದ ತೊಗಟೆಯನ್ನ ಹೊಂದಿದ್ದು, ಸುಮಾರು 10-12 ಮಿಮಿ ದಪ್ಪವಿರುತ್ತದೆ. ತಿಳಿಹಸಿರು ಬಣ್ಣದ ಸಾಮಾನ್ಯ ಎಲೆಗಳನ್ನು ಹೊಂದಿದ್ದು, ಚಳಿಗಾಲದಲ್ಲಿ ಎಲೆಗಳು ಕೆಂಪಾಗುತ್ತವೆ. ಮರದ ಪ್ರತೀ ರೆಂಬೆಯ ತುದಿಯಲ್ಲಿ ಹಸಿರು ಬಿಳಿ ಮಿಶ್ರಿತ ಹೂಗಳು ಬೆಳೆಯುತ್ತವೆ. ಈ ಮರದ ತೊಗಟೆ ಮತ್ತು ಹೂಗಳನ್ನು ಭಾರತೀಯ ಆಯುರ್ವೇದದಲ್ಲಿ ಕೆಮ್ಮು ಮತ್ತು ನೆಗಡಿ ಮೊದಲಾದವುಗಳಿಗೆ ಔಷಧಿಯಾಗಿ ಬಳಸುತ್ತಾರೆ. ಈ ಗೌಜಲ ಹಣ್ಣಿನ ಸವಿಯನ್ನು ಸವಿಯಲು ಜಿಂಕೆ, ಮುಳ್ಳುಹಂದಿ, ಕಾಡುಹಂದಿ, ಆನೆಗಳು ಲಗ್ಗೆ ಇಡುತ್ತವೆ. ಈ ಮರದ ಹಣ್ಣುಗಳು ನಾರಿನಿಂದ ಕೂಡಿದ್ದು ತಿಂದರೆ ಸ್ವಲ್ಪ ನಶೆ ಏರುತ್ತದೆ. ಇವುಗಳನ್ನು ತಿಂದ ಪ್ರಾಣಿಗಳು ಈ ಹಣ್ಣುಗಳನ್ನು ಸಮಾರಾಧನೆ ಮಾಡಿ ನಶೆ ಏರಿ, ಕುಡುಕರನ್ನೂ ನಾಚಿಸುವಂತೆ ತೂರಾಡುತ್ತಾ ಸಾಗುತ್ತವೆ.

.

# ವಿಶ್ವ ಹಾವುಗಳ ದಿನಾಚರಣೆ




ಹಾವೆಂದರೆ ಭಯದಿಂದ ಮಾರು ದೂರ ಓಡುವ ಮನುಷ್ಯ, ಭಕ್ತಿಯಿಂದ ನಾಗರ ಕಲ್ಲಿಗೆ (ಕಲ್ಲು ನಾಗರಕ್ಕೆ) ಹಾಲೆರೆಯುತ್ತಾನೆ. ಇಲ್ಲಿ ಭಯ ಮತ್ತು ಭಕ್ತಿಗಳ ನಡುವೆ ಇರುವ ಅಂತರ ನಂಬಿಕೆ ಅಷ್ಟೇ. ಹೌದು ಎಲ್ಲಾ ವಿಷಯಗಳಲ್ಲೂ ನಂಬಿಕೆ ಗಳಿಸುವುದು ಸುಲಭವಲ್ಲ. ಅಂತಹ ಸಾಲಿನಲ್ಲಿ ಹಾವುಗಳ ವಿಷಯವೂ ಒಂದು. ಬಹುಶಃ ಹಾವಿನ ಕುರಿತಾಗಿ ನಮ್ಮ ಪುರಾಣಗಳಲ್ಲಿ ಬರುವ ರೋಚಕ ಸಂಗತಿಗಳು, ಸಿನಿಮಾ ಮತ್ತು ಈಗೀಗ ಧಾರಾವಾಹಿಗಳಲ್ಲಿ ತೋರಿಸುವ ವಿಜೃಂಭಿತ ದೃಶ್ಯಗಳು ಹಾಗೂ ಜನ ಕಟ್ಟುವ ಕಲ್ಪಿತ ಕಥೆಗಳಿಂದ, ಹಾವು ನಮ್ಮಲ್ಲಿ ಭಯವನ್ನುಂಟು ಮಾಡುವ ಭಯಾನಕ ಜೀವಿಯಾಗಿ ಉಳಿದಿದೆ.

ಪ್ರಪಂಚದಲ್ಲಿ ಸುಮಾರು 3500ಕ್ಕೂ ಹೆಚ್ಚಿನ ಜಾತಿಯ ಹಾವುಗಳಿದ್ದು ಶೇಕಡಾ ತೊಂಭತ್ತರಷ್ಟು ಹಾವುಗಳು ವಿಷರಹಿತ (Non-Venomous) ವಾಗಿದ್ದು ಉಳಿದ ಹತ್ತರಷ್ಟು ಮಾತ್ರ ವಿಷಪೂರಿತ(Venomous) ಹಾವುಗಳಾಗಿವೆ. ಹಾವು ಶೀತರಕ್ತಪ್ರಾಣಿ(Cold-Blooded). ಭಾರತದಲ್ಲಿ ಸುಮಾರು ಎರಡುನೂರಾ ಎಪ್ಪತ್ತಕ್ಕೂ ಅಧಿಕ ಪ್ರಭೇದದ ಹಾವುಗಳಿದ್ದು ಅವುಗಳಲ್ಲಿ ಮನುಷ್ಯನನ್ನು ಕೊಲ್ಲುವಷ್ಟು ವಿಷವಿರುವುದು ನಾಲ್ಕು ಹಾವುಗಳಾದ ಕಾಳಿಂಗ(King Cobra) ನಾಗರಹಾವು(Cobra), ಕನ್ನಡಿ ಅಥವಾ ಕೊಳಕು ಮಂಡಲ(Viper) ಮತ್ತು ಕಡಂಬಳ ಅಥವಾ ಕಟ್ಟುಹಾವು(Common Krait). ತಿಳುವಳಿಕೆಯ ಕೊರತೆ ಮತ್ತು ಅಜಾಗರೂಕತೆಯಿಂದ ಈ ಹಾವುಗಳ ಕಡಿತದಿಂದ ಭಾರತದಲ್ಲಿ ಪ್ರತಿ ವರ್ಷ 40000 - 45000 ಕ್ಕೂ ಅಧಿಕ ಮಾನವನ ಸಾವುಗಳುಂಟಾಗುತ್ತಿವೆ. ನಾಗರ ಹಾವು ಮತ್ತು ಕನ್ನಡಿ ಜಾತಿಯ ಹಾವುಗಳ ಕಡಿತದಿಂದ ಹೆಚ್ಚಿನ ಸಾವು ದಾಖಲಾಗಿವೆ. ಕಾಳಿಂಗ ಸರ್ಪಗಳು ಪಶ್ಚಿಮಘಟ್ಟದ ದಟ್ಟ ಅರಣ್ಯದ ಆವಾಸದಲ್ಲಿ ಮಾತ್ರ ಕಾಣಸಿಗುತ್ತವೆ.




ಇನ್ನು ಬಯಲುಸೀಮೆಯಲ್ಲಿ ನಾಗರಹಾವುಗಳ ಸಂತತಿ ಶ್ರೀಮಂತಿಕೆಯಿಂದ ಕೂಡಿದ್ದು ಜೀವವೈವಿಧ್ಯತೆಯ ಮಹತ್ವ ಮತ್ತು ಜಾಗೃತಿ ಕೊರತೆಯಿಂದಾಗಿ ಪ್ರತಿದಿನ ಒಂದಿಲ್ಲೊಂದು ಸ್ಥಳದಲ್ಲಿ ನಾಗರಹಾವುಗಳು ಕೊಲ್ಲಲ್ಪಡುತ್ತಿವೆ. ಮೇಲೆ ತಿಳಿಸಿದ ನಾಲ್ಕು ಜಾತಿ ಹಾವು ಬಿಟ್ಟು ನಮ್ಮಲ್ಲಿ ಸಾಮಾನ್ಯವಾಗಿ ಕಂಡುಬರುವ ವಿಷಕಾರಿಯಲ್ಲದ (Non-Venomous) ಹಾವುಗಳೆಂದರೆ ತೋಳ ಹಾವು(Wolf Snake), ಕೇರೆಹಾವು (Rat Snake), ಹಸಿರು ಚೌಕಳಿ ಹಾವು (Green Keelback), ಚೌಕಳಿ ಹಾವು(Checkered Keelback), ಕುಕ್ರಿ ಹಾವು, ಡುಮರಿಲ್ ಕಪ್ಪು ತಲೆ ಹಾವು (Dumeril black headed snake ),ಬ್ರಾಹ್ಮಿಣಿ ಕುರುಡು ಹಾವು-ಅತಿ ಚಿಕ್ಕ ಹಾವು (Brahmini blind snake), ಆಭರಣ ಹಾವು (Common Trinket) ಹಸಿರು ಬಳ್ಳಿ ಹಾವು (Green Vine Snake), ಕಂದು ಬಳ್ಳಿ ಹಾವು(Brown Vine Snake), ಮಣ್ಣುಮುಕ್ಕಹಾವು (Sand Boa), ವ್ಹಿಟ್ಟಕರ್ಸ್ ಬೋವಾ (Whitaker's boa), ಬೋಲನಾಥಿ (Coluber gracilis) ಹಾವು ಮತ್ತು ಜೋರು ಪೋತ (Banded Racer) – ಇವು ಗೋಚರಿಸುವುದು ತೀರ ವಿರಳ. ಈ ವಿಷಕಾರಿಯಲ್ಲದ ಹಾವುಗಳ ವಿಷ (ಮೈಲ್ಡ್ ವೆನಮ್) ತಮ್ಮ ಬೇಟೆಯನ್ನು ನಿಷ್ಕ್ರಿಯಗೊಳಿಸುವಷ್ಟು ಮಾತ್ರ ಸಾಮರ್ಥ್ಯ ಹೊಂದಿದ್ದು ಮನುಷ್ಯರಿಗೆ ಅಥವಾ ಪ್ರಾಣಿಗಳಿಗೆ ಮಾರಣಾಂತಿಕವಲ್ಲ/ ಯಾವುದೇ ಅಪಾಯವಿರುವುದಿಲ್ಲ. ಸಾಮಾನ್ಯವಾಗಿ ಹಾವುಗಳು ಮನುಷ್ಯನ ಆವಾಸಸ್ಥಾನದಿಂದ ದೂರವಿರಲು ಇಷ್ಟಪಡುತ್ತವೆ, ಮನುಷ್ಯನ ಆವಾಸದ ಹತ್ತಿರಕೂಡಾ ಸುಳಿಯುವುದಿಲ್ಲ. ಕಪ್ಪೆ ಅಥವಾ ಇಲಿ ಅಂದರೆ ತನ್ನ ಆಹಾರ ಹುಡುಕುವ ಸಂದರ್ಭದಲ್ಲಿ ಅಥವಾ ನುಂಗಿದ ಸಂದರ್ಭದಲ್ಲಿ ಮನುಷ್ಯನ ಆವಾಸದಲ್ಲಿರುವ ಮನೆ ಅಥವಾ ಪಾಳು ಬಿದ್ದ ಕಟ್ಟಡಗಳಲ್ಲಿ ಆಶ್ರಯ ಪಡೆಯಬಹುದು.

ಭಯದಿಂದ ಹಾವು ಕಂಡ ತಕ್ಷಣ ಕೊಲ್ಲುವುದು, ಅರಣ್ಯನಾಶ, ಆವಾಸ ನಾಶ, ರಸ್ತೆ ಅಪಘಾತಗಳು, ಕಳ್ಳಸಾಗಣೆಯಂತಹ ಕಾನೂನು ಬಾಹಿರ ಚಟುವಟಿಕೆಗಳಿಂದ ಇಂದು ಹಾವುಗಳ ಸಂತತಿ ನಶಿಸುತ್ತಿದೆ. ಹಾವುಗಳು ತಮ್ಮ ಜೀವಿತಾವಧಿಯಲ್ಲಿ ಸಾವಿರಕ್ಕೂ ಹೆಚ್ಚು ಇಲಿಗಳನ್ನು ಭಕ್ಷಿಸುವುದರ ಮೂಲಕ ಇಲಿಗಳಿಂದ ಹರಡಬಹುದಾದ ರೋಗದಿಂದ ರಕ್ಷಿಸುವುದಲ್ಲದೆ ರೈತಮಿತ್ರನಾಗಿ ಪರಿಸರ ವ್ಯವಸ್ಥೆಯ ಆಹಾರ ಸರಪಳಿಯಲ್ಲಿ ಮತ್ತು ಪರಿಸರ ಸಮತೋಲನದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಹಾವುಗಳನ್ನು ಸಂರಕ್ಷಿಸಲು ಹಾಗೂ ಸಾರ್ವಜನಿಕರಿಗೆ ಪರಿಸರದಲ್ಲಿ ಉರಗಗಳ ಮಹತ್ವದ ಅರಿವು ಮೂಡಿಸಲು ಪ್ರತಿ ವರ್ಷ ಜುಲೈ 16ರಂದು ವಿಶ್ವ ಹಾವುಗಳ ದಿನವನ್ನು ಆಚರಿಸಲಾಗುತ್ತದೆ. (2013 ಜುಲೈ 16 ರಿಂದ ಪ್ರಾರಂಭ-ಪ್ರತಿ ವರ್ಷ ಜುಲೈ ತಿಂಗಳಲ್ಲಿ ದಿನಾಂಕ ಬದಲಾಗಬಹುದು). ಈ ದಿನದಂದು ವಿಶ್ವದಾದ್ಯಂತ ಪರಿಸರ ವ್ಯವಸ್ಥೆಯ ಸಮತೋಲನದಲ್ಲಿ ಉರಗಗಳ ಮಹತ್ತರವಾದ ಪಾತ್ರ ಮತ್ತು ಮಾನವ-ಉರಗಗಳ ಸಂಘರ್ಷ ನಿಯಂತ್ರಿಸುವ ಕ್ರಮ ಹಾಗೂ ಉರಗಗಳ ಬಗ್ಗೆ ಇರುವ ಮೂಢನಂಬಿಕೆಗಳ ಕುರಿತು ಶಾಲಾ-ಕಾಲೇಜು ಮತ್ತು ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಆಯೋಜಿಸಲಾಗುತ್ತದೆ.

## ಉರಗಗಳ ಸಂರಕ್ಷಣೆಯಲ್ಲಿ ಸಾರ್ವಜನಿಕರ ಪಾತ್ರ:

ಹಾವು ಕಂಡರೆ ಭಯಪಡದೆ ಆತಂಕಗೊಳ್ಳದೆ ಹತ್ತಿರದಲ್ಲಿ ಲಭ್ಯವಿರುವ ನುರಿತ ಉರಗಸಂರಕ್ಷಕರನ್ನು ಸಂಪರ್ಕಿಸಿ ವಿಷಯ ತಿಳಿಸಿ ಅವರು ಬರುವವರೆಗೂ ದೂರವಾಣಿ ಮೂಲಕ ಅವರು ನೀಡುವ ಸೂಚನೆಗಳನ್ನು ಪಾಲಿಸಿ, ಅವಸರ ಪಡಬೇಡಿ. ಅವರು ಬರುವವರೆಗೂ ಸಹಕರಿಸಿ ನಂತರ ಅವರು ಉರಗವನ್ನು ಸಂರಕ್ಷಿಸಿ ಸುರಕ್ಷಿತ ಸ್ಥಳಕ್ಕೆ ಬಿಡುತ್ತಾರೆ. ಕೆಲುವು ಪ್ರಭೇದದ ಹಾವುಗಳು ಅಂದರೆ ತೋಳಹಾವು, ಆಭರಣ ಹಾವು ನಿಶಾಚರಿಯಾಗಿದ್ದು ಮನುಷ್ಯನ ಆವಾಸದ ಸುತ್ತಮುತ್ತ ಇರುವ ವಿಷಕಾರಿಯಲ್ಲದ ಹಾವುಗಳಾಗಿದ್ದು ಹಲ್ಲಿಗಳ ಸಂತತಿಯನ್ನು ನಿಯಂತ್ರಿಸುವಲ್ಲಿ ಪ್ರಮುಖ ಪಾತ್ರವಹಿಸುವುದರಿಂದ ಸಾರ್ವಜನಿಕರು ಆತಂಕ ಪಡಬೇಕಾಗಿಲ್ಲ.

## ಉರಗ ಪ್ರೇಮಿ/ಸಂರಕ್ಷಕರಲ್ಲಿ ಮನವಿ:




ಹಾವುಗಳನ್ನು ಹಿಡಿದು ರಕ್ಷಿಸಿ ಅವುಗಳ ಆವಾಸಕ್ಕೆ ಬಿಡುವುದು ಒಂದು ಕಲೆ. ಸರಿಯಾದ ಸಂಪೂರ್ಣ ಜ್ಞಾನವಿಲ್ಲದೆ ದುಸ್ಸಾಹಸಕ್ಕೆ ಕೈಹಾಕಬಾರದು. ರಾಜ್ಯದ ಎಲ್ಲೆಡೆ ಸುಮಾರು ವರ್ಷಗಳಿಂದ ನುರಿತ ಉರಗ ಸಂರಕ್ಷಕರಿದ್ದಾರೆ, ಈ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ಪ್ರತಿಯೊಬ್ಬರು ಪ್ರತಿ ಬಾರಿ ಹಾವನ್ನು ರಕ್ಷಿಸುವಾಗ ಜಾಗೃತಿ ವಹಿಸಬೇಕು, ಅಜಾಗರೂಕತೆಯಿಂದ ಸಮಸ್ಯೆಗಳಿಗೆ ಆಹ್ವಾನ ನೀಡಬಾರದು. ಎಷ್ಟೋ ಸಾರಿ ಸಂರಕ್ಷಕರೇ, ತಾವು ಎಸಗುವ ತಪ್ಪಿನಿಂದಾಗಿಯೋ ಅಥವಾ ಅಜಾಗರೂಕತೆಯಿಂದಾಗಿಯೋ ಹಾವುಗಳ ಕಡಿತಕ್ಕೊಳಗಾದ ಎಷ್ಟೋ ಘಟನೆಗಳು ಸಂಭವಿಸಿವೆ. ಯಾವುದೇ ಹಾವನ್ನು ಸಂರಕ್ಷಿಸುವಾಗ ಹಾವನ್ನು ಸಾರ್ವಜನಿಕರ ಮನರಂಜನೆಗೆ ಪ್ರದರ್ಶಿಸಬಾರದು. ಇಲ್ಲಿ ಹಾವು ಸಂರಕ್ಷಿಸುವುದು ಎಷ್ಟು ಮುಖ್ಯವೋ ಸಂರಕ್ಷಕನ ಪ್ರಾಣವೂ ಅಷ್ಟೇ ಮುಖ್ಯ ಎನ್ನುವುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಫೋಟೋಗಾಗಿ ಮೇಲೆತ್ತುವುದು, ಹೆಡೆಗೆ ಮುತ್ತಿಡುವುದು ಮುಂತಾದ ದುಸ್ಸಾಹಸಗಳನ್ನು ಮಾಡಬೇಡಿ. ಸಾಧ್ಯವಾದಷ್ಟು ಬೇಗನೆ ಉತ್ತಮವಾದ ಚೀಲದೊಳಕ್ಕೆ ಹಾಕಿ ಅವುಗಳ ಆವಾಸ ಸ್ಥಾನಕ್ಕೆ ಬಿಡುವುದು ಒಳಿತು.

ಇನ್ನೊಂದು ಪ್ರಮುಖ ವಿಚಾರವೆಂದರೆ ನಾಗರ ಹಾವಾಗಲಿ ಅಥವಾ ಇನ್ನಾವುದೇ ಹಾವಾಗಲಿ ಹಾಲು ಕುಡಿಯುವುದಿಲ್ಲ, ಹಾಗಾಗಿ ಅವುಗಳಿಗೆ ಒತ್ತಾಯಪೂರ್ವಕವಾಗಿ ಹಾಲು ಕುಡಿಸಬೇಡಿ. ಹಾಲಿನಲ್ಲಿರುವ ಪ್ರೋಟೀನ್ ಅನ್ನು ಜೀರ್ಣಿಸಿಕೊಳ್ಳುವ ಶಕ್ತಿ ಹಾವಿನ ಜೀರ್ಣಾಂಗ ವ್ಯವಸ್ಥೆಯಲ್ಲಿ ಇಲ್ಲ. ಹಾವುಗಳು ತಮ್ಮ ಆಹಾರವನ್ನು ಜೀವಂತ ಬೇಟೆಯಾಡಿ ತಿನ್ನುವಂಥ ಪ್ರಾಣಿ. ಹಾವುಗಳು ಆಹಾರ ತಿಂದ ಸಮಯದಲ್ಲಿ ಅವುಗಳನ್ನು ಹಿಡಿಯಲು/ ಮುಟ್ಟಲು ಹೋಗಬಾರದು, ಆಗ ತಿಂದ ಆಹಾರವನ್ನು ಹೊರಹಾಕುತ್ತವೆ, ಕಾರಣ ಮನುಷ್ಯ ಹಿಡಿಯಲು ಹೋದಾಗ ಪಲಾಯನ ಮಾಡಲು ಪ್ರಯತ್ನಿಸುತ್ತವೆ. ಇಂಥ ಸಮಯದಲ್ಲಿ ತಮ್ಮ ಹೊಟ್ಟೆಯಲ್ಲಿರುವ ಆಹಾರ ಹೊರಹಾಕಿದರೆ ಅವುಗಳ ದೇಹ ಭಾರ ಕಡಿಮೆಯಾಗಿ ಚಲನೆಗೆ ಸುಲಭವಾಗಲೆಂದು ವಾಂತಿ ಮಾಡುತ್ತವೆ. ಆಹಾರ ಜೀರ್ಣವಾಗುವವರೆಗೂ

ಒಂದೇ ಸ್ಥಳದಲ್ಲಿ ವಿಶ್ರಮಿಸಿ ನಂತರ ಹೊರಟು ಹೋಗುತ್ತವೆ. ಇಂತಹ ಸಂದರ್ಭದಲ್ಲಿ ಹಾವನ್ನು ಸ್ವಲ್ಪ ಗಮನವಿಟ್ಟು ನೋಡಿಕೊಂಡು ನಂತರ ಸಾಗಿಸುವುದು ಒಳಿತು.

**ಪ್ರಥಮ ಚಿಕಿತ್ಸೆ:**




ನಮ್ಮ ಭಾಗದ ಜನ ಹಾವು ನೋಡಿದರೆ ಭಯಪಡುವರು, ಅದು ವಿಷಕಾರಿಯೋ ಅಥವಾ ವಿಷರಹಿತವೋ ಅನ್ನುವುದನ್ನು ವಿವೇಚಿಸದೆ ಗಾಬರಿಯಿಂದಲೇ ಅರ್ಧ ಸಾಯುತ್ತಾರೆ. ನಾಗರ ಹಾವು, ಕೊಳಕ ಮಂಡಲ( ದಾಸರಹಾವು/ ರಸಲ್ ವೈಪರ್) ಕಚ್ಚಿದರೆ ಸಮಯಕ್ಕೆ ಸರಿಯಾಗಿ ಪ್ರಥಮ ಚಿಕಿತ್ಸೆ ಮಾಡಿ ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಕೊಡಿಸಿದರೆ ಖಂಡಿತಾ ಪ್ರಾಣ ಉಳಿಸಬಹುದು. ಕಚ್ಚಿದ ಜಾಗವನ್ನು ಸಾಬೂನು ಮಿಶ್ರಿತ ನೀರಿನಿಂದ ತೊಳೆದು ಕಚ್ಚಿದ ಜಾಗದಿಂದ ಸ್ವಲ್ಪ ಮೇಲಕ್ಕೆ ಒಂದು ಸಣ್ಣ ಬೆರಳು ತೂರುವಷ್ಟು ಸಡಿಲವಾಗಿ ಕಟ್ಟನ್ನು ಕಟ್ಟಿ ಸಾಧ್ಯವಾದಷ್ಟು ಬೇಗನೆ ಆಸ್ಪತ್ರೆಗೆ ಸಾಗಿಸಬೇಕು. ಕಡಿತಕ್ಕೊಳಗಾದ ವ್ಯಕ್ತಿಗೆ ಧೈರ್ಯ ತುಂಬಿ ಹತ್ತಿರದ ಸರಕಾರಿ ಆಸ್ಪತ್ರೆಗಳಲ್ಲಿ ಪ್ರತಿವಿಷ ಹಾಗೂ ಅದನ್ನು ನೀಡುವ ನುರಿತ ವೈದ್ಯರಿರುವ ವ್ಯವಸ್ಥೆ ಇರುವೆಡೆ ಕರೆದೊಯ್ಯಬೇಕು. ಮನೆಯ ಸುತ್ತಮುತ್ತ ಸ್ವಚ್ಛತೆ ಕಾಪಾಡಿಕೊಳ್ಳಿ ಸಂಗ್ರಹ ಕೋಣೆ (ಸ್ಟೋರ್ ರೂಂ) ಗಳನ್ನು ಆಗಾಗ ಸ್ವಚ್ಛಗೊಳಿಸಿ ಹಾವುಗಳು ಬರುವುದಿಲ್ಲ. ರೈತರು ರಾತ್ರಿ ಸಮಯದಲ್ಲಿ ತೋಟಗಳಲ್ಲಿ ನೀರು ಹಾಯಿಸುವಾಗ ಒಳ್ಳೆ ಟಾರ್ಚ್ ಬಳಸಿ ಸಾಧ್ಯವಾದರೆ ಗಮ್-ಬೂಟ್(Ankle cut shoe) ಬಳಸಬಹುದು. ಸಾಮಾನ್ಯವಾಗಿ ಹಾವುಗಳು ಮನುಷ್ಯನನ್ನು ಕಂಡರೆ ಭಯಪಟ್ಟು ಪಲಾಯನ ಮಾಡುತ್ತವೆ.

ಪರಿಸರ ಅಧ್ಯಯನ ಪಠ್ಯಕ್ರಮದಲ್ಲಿ ಪರಿಸರ ಸಂರಕ್ಷಣೆಯ ನಿಟ್ಟಿನಲ್ಲಿ ವಿದ್ಯಾರ್ಥಿಗಳ ಮನೋಭಾವನೆಯನ್ನು ಪರಿವರ್ತಿಸಲು ಅಳವಡಿಸಲಾಗಿದ್ದು ಶಿಕ್ಷಕರ ಪಾತ್ರ ಮಹತ್ವವಾಗಿದ್ದು 'ಪರಿಸರ ಅಧ್ಯಯನ' ಪರೀಕ್ಷೆಗಷ್ಟೆ ಸೀಮಿತವಾಗಬಾರದು. ಶಾಲೆಯೊಳಗಡೆ ಹಾವುಗಳು ಅಕಸ್ಮಾತಾಗಿ ಬಂದಾಗ ಶಿಕ್ಷಕರೇ ಹಾವುಗಳನ್ನು ಸಾಯಿಸಿದ ಉದಾಹರಣೆಗಳಿವೆ. ಹಾವು ಮನುಷ್ಯನ ಆವಾಸ ಸ್ಥಾನಕ್ಕೆ ಬರದಂತೆ ಸ್ವಚ್ಛತೆಯನ್ನು ಕಾಪಾಡಿದರೆ ಕಡಿತಕ್ಕೊಳಗಾಗುವುದನ್ನು ತಪ್ಪಿಸಬಹುದು.

## ಬಿಬ್ರಾನ್ ಹವಳದ ಹಾವು:

ಈ ವಿಷಕಾರಿ ಅಪರೂಪದ ಹಾವು ಕೇವಲ ಪಶ್ಚಿಮಘಟ್ಟದ ಅರಣ್ಯಗಳಲ್ಲಿ ಮಾತ್ರ ಕಂಡುಬರುವುದು, ಶುಷ್ಕ ಅರಣ್ಯಗಳಲ್ಲಿ ಕಂಡುಬಂದ ದಾಖಲೆಗಳು ಅತಿವಿರಳ.


© ಧನರಾಜ್ ಎಂ.

ರಸ್ತೆ ಅಪಘಾತ: ರಸ್ತೆ ಅಪಘಾತವು ಹಾವುಗಳ ಸಂತತಿಯ ಇಳಿಕೆಯಲ್ಲಿ ಒಂದು ಪ್ರಮುಖ ಕಾರಣವಾಗಿದೆ. ವಿಶೇಷವಾಗಿ ಮುಂಗಾರಿನ ಋತುವಿನಲ್ಲಿ ಕರ್ನಾಟಕದ ಪಶ್ಚಿಮಘಟ್ಟಗಳ ರಸ್ತೆಯಲ್ಲಿ ಪ್ರತಿ ಒಂದು ಕಿ.ಮೀ ವ್ಯಾಪ್ತಿಯಲ್ಲಿ ಎರಡು-ಮೂರು ವಿವಿಧ ಜಾತಿಯ ಹಾವುಗಳು ವಾಹನ ಹಾಯ್ದು ಸಾಯುತ್ತಿರುತ್ತವೆ. (ಇದರಲ್ಲಿ ಹೆಚ್ಚಾಗಿ ಹಸಿರುಬಳ್ಳಿ ಹಾವು ಮತ್ತು ಕಂದು ಬಳ್ಳಿ ಹಾವು ಸಾವನ್ನಪ್ಪುತ್ತವೆ.) ಕೆ.ಟಿ.ಆರ್ ಕ್ಷೇತ್ರ ವ್ಯಾಪ್ತಿಯಲ್ಲಿ ವರ್ಷಕ್ಕೆ 2000-2500 ವಿವಿಧ ಪ್ರಭೇದದ ಹಾವುಗಳು ಸಾಯುತ್ತವೆ. (ವನ್ಯಜೀವಿ ವಲಯದಲ್ಲಿ ವಾಹನಗಳನ್ನು ನಿಧಾನವಾಗಿ ಓಡಿಸುವುದರ ಮೂಲಕ ಸಾವುಗಳ ಸಂಖ್ಯೆಯನ್ನು ಕಡಿಮೆಗೊಳಿಸಬಹುದು.)

ಉರಗಗಳು ವನ್ಯಜೀವಿ ಸಂರಕ್ಷಣಾ ಕಾಯ್ದೆ-1972 ಸ್ಕೆಡ್ಯೂಲ್-IIರ ಅಡಿಯಲ್ಲಿ ಸಂರಕ್ಷಣೆ ಪಡೆದಿವೆ. ಇದರ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವುದು ಅವಶ್ಯ. ವನ್ಯಜೀವಿ ಕಾಯ್ದೆ ಪ್ರಕಾರ ಭಾರತದಲ್ಲಿ ಹಾವಾಡಿಗರು ಹಾವು ಹಿಡಿದು ಸಾರ್ವಜನಿಕರ ಮನರಂಜನೆಗೆ ಪ್ರದರ್ಶಿಸುವುದನ್ನು ನಿಷೇಧಿಸಲಾಗಿದ್ದು ಅಂತಹ ಪ್ರಕರಣಗಳು ಕಂಡುಬಂದಲ್ಲಿ ಹತ್ತಿರದ ಪೋಲೀಸ್ ಇಲಾಖೆ ಅಥವಾ ಅರಣ್ಯ ಇಲಾಖೆಯ ಗಮನಕ್ಕೆ ತರಬೇಕು(ಪ್ರಾಣಿದಯ/ಸಂರಕ್ಷಣ ಸಂಸ್ಥೆಗಳಿಗೆ ಕೂಡಾ ತಿಳಿಸಬಹುದು) ಅರಣ್ಯ ಇಲಾಖೆ ಜೊತೆ ಸಾರ್ವಜನಿಕರು ಸಹಕರಿಸಿ ಹಾವುಗಳ ಸಂತತಿಯನ್ನು ಸಂರಕ್ಷಿಸುವ ಮನೋಭಾವ ಬೆಳೆಸಿಕೊಳ್ಳೋಣ.

## ನರಗುಂದದಲ್ಲೊಬ್ಬ ಉರಗಪ್ರೇಮಿ:


© ಮಂಜುನಾಥ ನಾಯಕ

ಬುಡ್ನೆಸಾಬ ರಾಜೆಸಾಬ ಸೂರೇಬಾನ, ವಯಸ್ಸು-40 ನರಗುಂದದ ನಿವಾಸಿ. ವೃತ್ತಿಯಿಂದ ಗೃಹರಕ್ಷಕದಳ ಸಿಬ್ಬಂದಿಯಾಗಿ ಹನ್ನೊಂದು ವರ್ಷದಿಂದ ಸೇವೆಸಲ್ಲಿಸುತ್ತಿದ್ದು, ಸ್ಥಳೀಯರಲ್ಲಿ ಉರಗಪ್ರೇಮಿಯೆಂದೇ ಚಿರಪರಿಚಿತರು. ನರಗುಂದದ ಯಾವುದೇ ಮನೆ, ಕಛೇರಿ, ಶಾಲೆಯಲ್ಲಿ ಹಾವುಗಳು ಅಕಸ್ಮಾತಾಗಿ ಸೇರಿಕೊಂಡಿದ್ದರೆ ತಕ್ಷಣವೇ ನೆನಪಿಗೆ ಬರೋದು ಈ ಬುಡ್ಡಾ. ಸುಮಾರು ಮೂರು ವರ್ಷಗಳಿಂದ ತಮ್ಮ ವೃತ್ತಿಯೊಂದಿಗೆ ಉರಗ ಸಂರಕ್ಷಣೆಯ ಸೇವೆಯನ್ನು ಮಾಡುತ್ತಿದ್ದು ಇಲ್ಲಿವರೆಗೆ

ನಾಲ್ಕುನೂರಕ್ಕೂ ಅಧಿಕ ವಿವಿಧ ಜಾತಿಯ ಹಾವುಗಳನ್ನು ಸಂರಕ್ಷಿಸಿದ್ದಾರೆ. ಯಾರಾದರೂ ಸರಿ ಯಾವ ಸಮಯದಲ್ಲಿ (ಹಲವಾರು ಸಂದರ್ಭಗಳಲ್ಲಿ ಮಧ್ಯರಾತ್ರಿ 1ಗಂಟೆ ಮತ್ತು 3ಗಂಟೆ)ಉರಗ ರಕ್ಷಣೆಗಾಗಿ ಕರೆ ಮಾಡಿದರೂ ತಕ್ಷಣ ಸ್ಥಳಕ್ಕೆ ಧಾವಿಸಿ ಉರಗಗಳನ್ನು ಸುರಕ್ಷಿತವಾಗಿ ರಕ್ಷಿಸಿ ಅವುಗಳ ಆವಾಸಕ್ಕೆ ಬಿಡುತ್ತಾರೆ. ಇವರು ಒಬ್ಬ ಉತ್ತಮ ನೈತಿಕ ಸಂರಕ್ಷಕರಾಗಿದ್ದು ಸರಳ ಮತ್ತು ಸುರಕ್ಷ ಸಂರಕ್ಷಣಾ ವಿಧಾನದ ಮೂಲಕ ಹಾವುಗಳನ್ನು ರಕ್ಷಿಸುತ್ತಾರೆ. ಅನಿವಾರ್ಯತೆ ಇದ್ದಾಗ ಮಾತ್ರ ಹಾವುಗಳನ್ನು ಕೈಯಿಂದ ಹಿಡಿದು ಬ್ಯಾಗ್ ನಲ್ಲಿ ಹಾಕುತ್ತಾರೆ. ಹೆಚ್ಚಿನ ಸಂದರ್ಭದಲ್ಲಿ ಕಾಟನ್ ಬಟ್ಟೆಯ ಚೀಲದ ಬಾಯಿಗೆ ನಾಲ್ಕು ಇಂಚು ಸುತ್ತಳತೆ ಮತ್ತು ಐದು ಅಡಿ ಉದ್ದವಿರುವ ಪೈಪನ್ನು ಕಟ್ಟಿ ಹಾವಿನ ಎದುರಿಗೆ ಇಡುತ್ತಾರೆ. ಆಗ ಹಾವು ತಾನಾಗಿಯೇ ಒಳಗೆ ಸೇರಿಕೊಳ್ಳುತ್ತದೆ.




ಲಾಕ್ ಡೌನ್ ಸಂದರ್ಭದಲ್ಲಿ ಇವರು ನೂರಕ್ಕೂ ಅಧಿಕ ಹಾವುಗಳನ್ನು ಸುರಕ್ಷಿತವಾಗಿ ರಕ್ಷಿಸಿದ್ದು ಅದರಲ್ಲಿ ಹೆಚ್ಚಾಗಿ ನಾಗರಹಾವುಗಳೇ ಇದ್ದವು ಎನ್ನುವುದು ವಿಶೇಷ. ಕೊಳಕು ಮಂಡಲ ಅಥವಾ ದಾಸರ ಹಾವು (ರಸ್ಸೆಲ್ಸ್ ವೈಪರ್) ಅತ್ಯಂತ ಭಯಾನಕ ಮತ್ತು ವಿಷಕಾರಿ ಹಾವಾಗಿದ್ದು ಉರಗರಕ್ಷಕ ಎಷ್ಟೆ ಅನುಭವಿಯಾಗಿದ್ದರೂ ರಕ್ಷಿಸುವುದು ಸುಲಭದ ಮಾತಲ್ಲ. ಆದರೆ ಬುಡ್ಡಾ, ದಾಸರ ಹಾವು ರಕ್ಷಣೆಯಲ್ಲಿ ಎತ್ತಿದ ಕೈ. ಇಲ್ಲಿಯವರೆಗೆ ಇವರು ಹತ್ತಕ್ಕೂ ಅಧಿಕ ದಾಸರ ಹಾವುಗಳನ್ನು ಸುರಕ್ಷಿತವಾಗಿ ರಕ್ಷಿಸಿದ್ದಾರೆ (ಪೈಪ್-ಇನ್-ಬ್ಯಾಗ್ ಮೆಥಡ್).

"ಮೂರು ವರ್ಷಗಳ ಕಾಲ ನನ್ನ ಬಳಿ ಇವರು ಹಾವು ಸಂರಕ್ಷಣೆಯ ತರಬೇತಿಯನ್ನು ಪಡೆದುಕೊಂಡರು. ಇವರು ಸಂರಕ್ಷಿಸಿದ ಮೊದಲ ಹಾವು, ನಾಗರ ಹಾವು ಎಂಬುದು ವಿಶೇಷ. ನಾನು ಎಷ್ಟೋ ಆಸಕ್ತರಿಗೆ ಉರಗ ಸಂರಕ್ಷಣೆಯ ತರಬೇತಿ ನೀಡಿದ್ದು, ನಾ ಕಂಡ ಉರಗಸಂರಕ್ಷಕರಲ್ಲಿ ಬುಡ್ಡಾ ಒಬ್ಬ ಅದ್ಭುತ ಸಂರಕ್ಷಕ. ಹಾವನ್ನು ರಕ್ಷಿಸಿದ ಸ್ಥಳದಲ್ಲಿಯೇ ಸಾರ್ವಜನಿಕರಿಗೆ ಉರಗಗಳ ಮಹತ್ವ ಮತ್ತು ಮೂಢ ನಂಬಿಕೆ ಹಾಗೂ ತಪ್ಪು ಕಲ್ಪನೆಗಳ ಕುರಿತು ಜಾಗೃತಿ ಮೂಡಿಸುತ್ತಾರೆ. ಇವರು ಉರಗ ಸಂರಕ್ಷಣೆ ಮತ್ತು ವನ್ಯಜೀವಿ ಸಂರಕ್ಷಣೆಯನ್ನು ಉಚಿತವಾಗಿ ಮಾಡುತ್ತಾರೆ ಯಾರಿಂದಲೂ ಯಾವುದೆ ಹಣವನ್ನು ಪಡೆಯುವುದಿಲ್ಲ.

ಪರಿಸರ ಸಮತೋಲನದಲ್ಲಿ ಉರಗಗಳು ಮಹತ್ವದ ಪಾತ್ರ ವಹಿಸುತ್ತವೆ. ಪರಿಸರ ಸಮತೋಲನ ವ್ಯವಸ್ಥೆಯಲ್ಲಿ ಸೂಕ್ಷ್ಮ ಜೀವಿಗಳಿಂದ ಹಿಡಿದು ಬೃಹತ್ ಗಾತ್ರದ ಸಸ್ತನಿಗಳು ತಮ್ಮ ತಮ್ಮ ಪಾತ್ರವನ್ನು ನಿರ್ವಹಿಸುತ್ತವೆ-ಮಾನವರ ಹಸ್ತಕ್ಷೇಪದಿಂದಾಗಿ ಭೂಮಿಯ ಮೇಲಿನ ಎಷ್ಟೋ ಜೀವಿಗಳು ಅಳಿದು ಹೋಗುತ್ತಿವೆ, ಹಲವಾರು ಪ್ರಭೇದದ ಜೀವಿಗಳು ಅಳಿವಿನಂಚಿನಲ್ಲಿವೆ – ಎಲ್ಲ ಪ್ರಾಣಿ/ಪಕ್ಷಿಗಳ ಸಂರಕ್ಷಣೆ ನಮ್ಮೆಲ್ಲರ ಹೊಣೆ."

**ಚಿತ್ರ-ಲೇಖನ: ಮಂಜುನಾಥ ನಾಯಕ.**
ಗದಗ ಜಿಲ್ಲೆ.



© ಸೂರಜ್ ರೇವಾಡಿಗರ್

# ಊಸರವಳ್ಳಿ ವಿಭಿನ್ನ ಬಣ್ಣ ವಿಶಿಷ್ಟ ನೋಟ

ಈ ಪ್ರಕೃತಿ ಒಂದು ಅವರ್ಣನೀಯ ಜಗತ್ತು, ಎಲ್ಲಿ ನೋಡಿದರು ಬಣ್ಣ ಬಣ್ಣ. ನಿಸರ್ಗದ ಈ ಸಹಜ ಸೌಂದರ್ಯಕ್ಕೆ ಪ್ರತಿ ದಿನವು ಬಗೆ ಬಗೆಯ ಬಣ್ಣಗಳ ಹೋಳಿ ಅಂದರೆ ತಪ್ಪಾಗಲಾರದು. ವಿವಿಧ ವರ್ಣದ ಹೂವು, ಚಿಗುರೆಲೆಗಳು, ಚಿಟ್ಟೆಗಳು, ಬೆಟ್ಟ ಗುಡ್ಡಗಳ ತಿಳಿ ನೀಲಿ, ಮುಂಜಾನೆ-ಮುಸ್ಸಂಜೆಯ ಚಿತ್ತಾರದ ನಸುಗೆಂಪು, ಮಿಂಚು ಹುಳುಗಳ ಬೆಳಕಿನಾಟ ಹೀಗೆ ಹತ್ತು ಹಲವು ಬಗೆಯ ಪ್ರಕೃತಿಯ ರಂಗಿನಾಟದ ನಡುವೆ ಆಧುನಿಕ ಬದುಕು ಶೂನ್ಯ. ನಮ್ಮ ಸುತ್ತಮುತ್ತಲಿನಲ್ಲಿ ಅನೇಕ ವಿಧದ ಗಿಡ-ಮರ, ಹಕ್ಕಿ, ಕೀಟ, ಸರೀಸೃಪಗಳು ಹೀಗೆ ವಿವಿಧತೆಯನ್ನು ನೋಡುತ್ತೇವೆ. ಅವುಗಳು ಕೇವಲ ಒಂದು ಬಣ್ಣಕ್ಕೆ ಸೀಮಿತವಾಗಿಲ್ಲ ಒಂದೇ ರೀತಿಯ ಬಣ್ಣ ಹೊಂದಿರುವ ಜೀವಿಗಳಂತೆಯೇ ಬಣ್ಣ ಬದಲಿಸುವ ಹಾಗೂ ತಮ್ಮ ಸುತ್ತಲಿನ ಪರಿಸರದೊಂದಿಗೆ ಸೇರಿಕೊಂಡಿರುವ ಜೀವಿಗಳೂ ಇವೆ. ಒಮ್ಮೆ ನಮ್ಮ ಸುತ್ತಲಿನ ಪರಿಸರದಲ್ಲಿ ಸುಮ್ಮನೆ ಒಂದು ಸುತ್ತು ಹಾಕಿ ಬಂದರೆ ಸಾಕು ನಾವು ಎಷ್ಟು ವಿಧದ ಬಣ್ಣಗಳನ್ನು ನೋಡುತ್ತೇವೆಂಬುದು ನಮ್ಮ ಊಹೆಗೂ ನಿಲುಕದ ಸಂಗತಿ. ನಮಗೆ ತಿಳಿದಿರುವುದು ಕೇವಲ ಬೆರಳೆಣಿಕೆಯ ಬಣ್ಣಗಳಷ್ಟೆ, ಅದಕ್ಕೂ ಹೊರತಾಗಿ ಇರುವ ಬಣ್ಣಗಳನ್ನು ನಾವು ಗುರುತಿಸಲು ಸಹ ಸಾಧ್ಯವಿಲ್ಲ ಏಕೆಂದರೆ ಅವು ನಿಸರ್ಗದ ಸೊಬಗಿನಲ್ಲಿ ವಿಲೀನವಾಗಿರುತ್ತವೆ. ಆಳವಾಗಿ ಪ್ರಕೃತಿಯೊಂದಿಗೆ ಬೆರೆತಾಗ ಮಾತ್ರ ನಮಗೆ ಅದು ಅರಿವಿಗೆ ಬರುತ್ತದೆ.



© ಪ್ರಣವ್ ಪ್ರದೀಪ್

ಮರೆಮಾಚುವಿಕೆಯು ಜೀವಿಗಳು ತಮ್ಮ ಪರಿಸರದೊಂದಿಗೆ ಹೊಂದಿಕೊಳ್ಳಲು, ಬೇರೆ ಜೀವಿಗಳೊಡನೆ ಬೆರೆಯಲು, ಪರಭಕ್ಷಕಗಳಿಂದ ತಪ್ಪಿಸಿಕೊಳ್ಳಲು, ಸ್ಥಳ, ಗುರುತು ಮತ್ತು ಚಲನೆಯನ್ನು ಮರೆಮಾಚಲು ಹಾಗೂ ಆಹಾರ ಬೇಟೆಗಾಗಿ ನಡೆಸುವ ಒಂದು ನೈಸರ್ಗಿಕ ಪ್ರಕ್ರಿಯೆ. ಇದನ್ನು ರಹಸ್ಯ ಬಣ್ಣ (camouflage) ಎಂದು ಕರೆಯುತ್ತಾರೆ. ಇದು ಜೀವಿಗಳ ಬಾಹ್ಯ ಮತ್ತು ಆಂತರಿಕ ಲಕ್ಷಣಗಳ ಮೇಲೆ ಆಧಾರಿತವಾಗಿರುತ್ತದೆ, ಅಲ್ಲದೆ ಪರಭಕ್ಷಕ ಜೀವಿಗಳ ಇರುವಿಕೆಯ ಮೇಲೂ ಅವಲಂಬಿತವಾಗಿರುತ್ತದೆ ಮತ್ತು ಅವುಗಳ ರಕ್ಷಣೆಗೂ ಸಹಾಯವಾಗುತ್ತದೆ. ಈ ನಡವಳಿಕೆಯು ಮುಖ್ಯವಾಗಿ ಊಸರವಳ್ಳಿಯಲ್ಲಿ ಕಂಡುಬರುತ್ತದೆ.

ಊಸರವಳ್ಳಿ ಅಥವಾ ಗೋಸುಂಬೆ ಎಂದು ಕರೆಯುವ ಇದರ ವೈಜ್ಞಾನಿಕ ಹೆಸರು ಕಮಿಲಿಯೋ ಝೆಯ್ಲಾನಿಕಸ್(*chamaeleo zeylanicus*). ಏಕಾಂಗಿಯಾಗಿ ಬದುಕುವ ಇದು ಹಲ್ಲಿಯ ಜಾತಿಯದ್ದಾಗಿದ್ದು, (Chamaeleonidae) ಕುಟುಂಬಕ್ಕೆ ಸೇರಿದೆ. ಇದು ಉಷ್ಣವಲಯ ಮತ್ತು ಮಳೆ ಕಾಡಿನಲ್ಲಿ ವಾಸಿಸುತ್ತದೆ. ಇದು

ಹೆಚ್ಚಾಗಿ ಆಫ್ರಿಕ, ದಕ್ಷಿಣ ಏಷ್ಯ, ಯುರೋಪ್ ಮತ್ತು ಮಡಗಾಸ್ಕರ್ ನಲ್ಲಿ ಕಂಡುಬರುತ್ತದೆ. ಪ್ರಪಂಚದಾದ್ಯಂತ ಇದುವರೆಗು ನೂರಅರವತ್ತಕ್ಕೂ ಹೆಚ್ಚು ಪ್ರಭೇದಗಳನ್ನು ಗುರುತಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಒಂದು ಪ್ರಭೇದವನ್ನು ಕಮಿಲಿಯೋ ಝಿಯಾಲ್ನಿಕಸ್ (*chamaeleo zeylanicus* ) ಮಾತ್ರ ಗುರುತಿಸಲಾಗಿದೆ. ಇದರ ಮುಖ್ಯ ಆಹಾರ ಸಣ್ಣ ಕೀಟಗಳು, ಸೊಳ್ಳೆ, ಮಿಡತೆ, ದುಂಬಿ ಇತ್ಯಾದಿ.


© ಪ್ರಣವ್ ಪ್ರದೀಪ್

ಬೇಟೆಯನ್ನು ಹಿಡಿಯುವಾಗ ಇವು ತಮ್ಮದೇಹದ ಎರಡರಷ್ಟು ಉದ್ದವಿರುವ ನಾಲಗೆಯಲ್ಲಿನ ಅಂಟು ದ್ರವ್ಯವನ್ನು ಬಳಸುತ್ತವೆ. ಇದರ ಹಯಾಯ್ಡ್ ಮೂಳೆ (Hyoid bones), ಸ್ನಾಯುಗಳು ಮತ್ತು ಕೊಲಾಜಿನಸ್ ಅಂಶಗಳನ್ನು(Collagenous elements) ಒಳಗೊಂಡಿದೆ.ಈ ಹಯಾಯ್ಡ್ ಮೂಳೆಯು ಉದ್ದವಾದ ಸಮಾನಾಂತರವಾದ ಹಂಚಿಕೆಯನ್ನು ಹೊಂದಿದ್ದು ಇದನ್ನು ಎನ್ಟೊಗ್ಲಾಸಲ್ ಪ್ರಕ್ರಿಯೆ (Entoglossal process) ಎಂದು ಕರೆಯುತ್ತಾರೆ. ಅದರ ಮೇಲೆ ಕೊಳವೆಯಾಕಾರಾದ ಸ್ನಾಯು (Tubular muscles) ಮತ್ತು ವೇಗ ವರ್ಧಕ ಸ್ನಾಯು (Accelerator mussels) ಇರುವುದರಿಂದ ನಾಲಿಗೆಯ ಕಾರ್ಯಕ್ಷಮತೆ ಹೆಚ್ಚು ಮತ್ತು ಬೇಟೆಯನ್ನು ಮುಟ್ಟುವ ವೇಗವೂ ಹೆಚ್ಚು (0.07-0.08 ಸೆಕೆಂಡುಗಳು).

ಇದು ಸುಮಾರು 25-30 ಸೆಂ.ಮೀ. ಉದ್ದವಾಗಿದ್ದು, ಚರ್ಮವು ಮೊಸಳೆಯ ದೇಹದಂತೆ ಒರಟಾಗಿರುತ್ತದೆ ಹಾಗೂ ಕಾಲಕಾಲಕ್ಕೆ ಚರ್ಮವನ್ನು ಕಳಚುತ್ತದೆ. ಇದರ ಕಾಲಿನ ಪಾದಗಳಲ್ಲಿ ಸ್ಪಷ್ಟವಾಗಿ ಐದು ಬೆರಳುಗಳಿದ್ದು ಎರಡು ಭಾಗಗಳಾಗಿ ವಿಂಗಡನೆಯಾಗಿದೆ, ಒಂದು ಭಾಗದಲ್ಲಿ ಎರಡು ಬೆರಳು ಮತ್ತು ಇನ್ನೊಂದು ಭಾಗದಲ್ಲಿ ಮೂರು ಬೆರಳುಗಳಿವೆ. ಬೆರಳ ತುದಿಗೆ ಚೂಪಾದ ಉಗುರುಗಳು ಇರುವುದರಿಂದ ಮರದ ರೆಂಬೆಯನ್ನು ಗಟ್ಟಿಯಾಗಿ ಹಿಡಿದುಕೊಳ್ಳಲು ಸಹಾಯವಾಗುತ್ತದೆ. ಮುಂಭಾಗ ಮತ್ತು ಹಿಂಭಾಗದ ಕಾಲುಗಳ ರಚನೆ ವ್ಯತಿರಿಕ್ತವಾಗಿದ್ದು ಇದನ್ನು ಝೈಗೊಡೊಕ್ಟೈಲ್ ಪಾದ (Zygodactyl feet) ಎಂದು ಕರೆಯುತ್ತಾರೆ. ಬಾಲವು ಸುರಳಿಯಾಕಾರದ್ದಾಗಿದ್ದು ಅದು ಚಲಿಸುವಾಗ ಮರದ ರೆಂಬೆಯನ್ನು ಬಲವಾಗಿ ಹಿಡಿದುಕೊಳ್ಳಲು ಸಹಕಾರಿಯಾಗುತ್ತದೆ, ಇದನ್ನು ಐದನೇ ಕಾಲಿನ ರೀತಿಯಲ್ಲಿ ಬಳಸುತ್ತದೆ. ಈ ರಚನೆಗೆ ಪ್ರಿಹೆನ್ಸೈಲ್ ಟೇಲ್ (Prehensyle tail) ಎಂದು ಕರೆಯುತ್ತಾರೆ.


© ಪ್ರಣವ್ ಪ್ರದೀಪ್

ಇದರ ದೃಷ್ಟಿ ವಿಭಿನ್ನವಾಗಿದ್ದು ಸುಮಾರು ಮೂವತ್ತೆರಡು ಅಡಿಗಳಷ್ಟು ದೂರದವರೆಗೆ ವಸ್ತುಗಳನ್ನು ಸ್ಪಷ್ಟವಾಗಿ ನೋಡುವ ಸಾಮರ್ಥ್ಯ ಹೊಂದಿದ್ದು ಆಹಾರ ಹುಡುಕಲು ಸಹಕಾರಿಯಾಗಿದೆ. ಊಸರವಳ್ಳಿಯ ಇನ್ನೊಂದು ವೈಶಿಷ್ಟ್ಯವೇನೆಂದರೆ, ಎರಡೂ ಕಣ್ಣುಗಳು ಪ್ರತ್ಯೇಕ ಚಲನೆಯನ್ನು ಹೊಂದಿದ್ದು ಸುತ್ತಲೂ $360^0$ ವರೆಗೂ ತಿರುಗಿಸಿ ನೋಡುತ್ತದೆ. ಇದರ ಕಣ್ಣುಗಳ ಮೇಲಿನ ಹಾಗೂ ಕೆಳಗಿನ ರೆಪ್ಪೆಗಳು ಸೇರಿಕೊಂಡಿದ್ದು ಚಿಕ್ಕರಂಧ್ರದ ಮೂಲಕ ಹೊರಪ್ರದೇಶದ ಗೋಚರಿಸುವ ಬೆಳಕಿನ (Visible light) ಜೊತೆಗೆ ನೇರಳಾತೀತ ಕಿರಣ (Ultra-violet rays)ಗಳನ್ನೂ ನೋಡುತ್ತದೆ.

ಆಹಾರ ಸರಪಳಿಯಲ್ಲಿ ಇದು ಕೆಳ ಸ್ಥಾನದಲ್ಲಿದೆ, ಅಂದರೆ ಊಸರವಳ್ಳಿಯನ್ನು ತಿನ್ನುವ ಅನೇಕ ಜೀವಿಗಳು ಪರಿಸರದಲ್ಲಿವೆ. ಪರಭಕ್ಷಕಗಳಾದ, ಹಾವು, ಪಕ್ಷಿ ಮತ್ತು ಕೆಲವು ಸಲ ಮಂಗಗಳೂ ಸಹ ಇದನ್ನು ತಿನ್ನುವುದುಂಟು. ಇದರ ಒಟ್ಟು ಜೀವಿತಾವಧಿ ನಾಲ್ಕರಿಂದ ಎಂಟು ವರ್ಷಗಳು. ಐ.ಯು.ಸಿ.ಎನ್. ವರದಿಯ ಪ್ರಕಾರ ಊಸರವಳ್ಳಿಯನ್ನು ಅಳಿವಿನಂಚಿನಲ್ಲಿರುವ ಪ್ರಭೇದ ಎಂದು ಕೆಂಪು ಪಟ್ಟಿಯಲ್ಲಿ ಸೇರಿಸಲಾಗಿದೆ, ಇದರ ಪ್ರಭೇದಗಳಲ್ಲಿ ಕೆಲವೊಂದು ಈಗಾಗಲೆ ನಶಿಸಿ ಹೋಗಿವೆ ಎಂದೂ ಕೂಡ ಪ್ರಕಟಿಸಲಾಗಿದೆ.




ಊಸರವಳ್ಳಿಯ ಚಲನೆ ಬಹಳ ನಿಧಾನಗತಿಯದ್ದಾಗಿದ್ದು, ಇದರಿಂದ ಪರಭಕ್ಷಕಗಳಿಗೆ ಬಹಳ ಸುಲಭವಾಗಿ ಆಹಾರವಾಗುತ್ತದೆ. ಅವುಗಳಿಂದ ತಪ್ಪಿಸಿಕೊಳ್ಳಲು ತನ್ನ ದೇಹವನ್ನು ಹಿಗ್ಗಿಸಿ, ಚರ್ಮದ ಬಣ್ಣವನ್ನು ಬದಲಾಯಿಸಿಕೊಂಡು ಮರೆಮಾಚುವ ಗುಣ ಸಾಮರ್ಥ್ಯವನ್ನು ಹೊಂದಿದೆ ಮತ್ತು ಇದಲ್ಲದೆ ಇನ್ನೂ ಕೆಲವು ಪ್ರಯೋಜನಗಳನ್ನು ಪಡೆದುಕೊಳ್ಳುತ್ತದೆ.

**ಏಕೀ ಬಣ್ಣ ಬದಲಾವಣೆ?**




ಬಣ್ಣ ಬದಲಾವಣೆ ಊಸರವಳ್ಳಿಯ ಸಂವಹನ ಕ್ರಿಯೆಯಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ಇದು ಕಾಲಕ್ಕೆ ಅನುಗುಣವಾಗಿ ದೇಹದ ಬಣ್ಣವನ್ನು ಬದಲಿಸುತ್ತದೆ. ಸಂಗಾತಿಯನ್ನು ಆಕರ್ಷಿಸುವಲ್ಲಿ ತಿಳಿ ಬಣ್ಣದ ಪಾತ್ರ ಬಹಳ ಮುಖ್ಯ, ಹೆಣ್ಣಿಗೆ ಹೋಲಿಸಿದರೆ ಗಂಡು ಹೆಚ್ಚು ಆಕರ್ಷಕ ಬಣ್ಣದ್ದಾಗಿರುತ್ತದೆ.

ಒಂದು ಹೊಸ ಸಂಶೋಧನೆಯ ಪ್ರಕಾರ ಊಸರವಳ್ಳಿಯು ತತ್ ಕ್ಷಣದಲ್ಲಿ ತನ್ನ ದೇಹದಲ್ಲಿನ ವಿಶೇಷ ಕೋಶವಾದ ಇರಿಡೋಫೋರ್ ಕೋವನ್ನು (Iridophore cell) ಹೊಂದಿಸಿಕೊಂಡು ಬಣ್ಣ ಬದಲಿಸುತ್ತದೆ.ಈ ಕೋಶಗಳು ಚರ್ಮದೊಳಗೆ ಒಂದರ ಮೇಲೊಂದರಂತೆ ಎರಡು ಪದರಗಳನ್ನು ಹೊಂದಿದ್ದು ಈ ಪದರಗಳು ಸಾವಿರಾರು ಗ್ವಾನೈನ್ ನ್ಯಾನೋಕ್ರಿಸ್ಟಲ್(Guanine nanocrystals) ಜಾಲವನ್ನು ಹೊಂದಿದೆ. ಇದು ಬೆಳಕಿನ ಯಾವ ತರಂಗಾಂತರಗಳನ್ನು ಪ್ರತಿಬಿಂಬಿಸುತ್ತದೆ ಮತ್ತು ಹೀರಿಕೊಳ್ಳುತ್ತದೆ ಎಂಬುದರ ಮೇಲೆ ಬಣ್ಣದ ಪರಿಣಾಮ ಬೀರುತ್ತದೆ. ಈ ಕೋಶಗಳು ವರ್ಣಪಲ್ಲಟ ಕೊಳವೆಯಂತೆ (Prism)ಕಾರ್ಯನಿರ್ವಹಿಸುತ್ತದೆ. ಅವುಗಳ ಬಣ್ಣ ಮತ್ತು ದೇಹದ ಉಷ್ಣತೆಯನ್ನು ಈ ಪದರ ನಿಯಂತ್ರಿಸುತ್ತದೆ. ಅಂತೆಯೇ ಸಮಾಧಾನ ಅಥವಾ ಶಾಂತ ಸ್ಥಿತಿಯಲ್ಲಿ ಹರಳುಗಳು (crystals) ನೀಲಿ ಮತ್ತು ಹಸಿರು ಬಣ್ಣವನ್ನು ಪ್ರತಿಬಿಂಬಿಸುತ್ತದೆ ಹಾಗೂ ಉತ್ಸಾಹ ಭರಿತ ಸ್ಥಿತಿಯಲ್ಲಿ ಹಳದಿ, ಕಿತ್ತಲೆ ಮತ್ತು ಹಸಿರು ಬಣ್ಣಗಳಂತಹ ದೀರ್ಘ ತರಂಗಾಂತರಗಳನ್ನು ಪ್ರತಿಫಲಿಸುತ್ತದೆ. ಚರ್ಮದಲ್ಲಿರುವ ಹಳದಿ ವರ್ಣದ್ರವ್ಯವು (Pigments) ನೀಲಿ ವರ್ಣದ್ರವ್ಯದೊಂದಿಗೆ ಸಂಯೋಜಿತವಾಗಿ ಹಸಿರು ಬಣ್ಣಕ್ಕೆ ಕಾರಣವಾಗುತ್ತದೆ.

ಕೆಲವು ಸಂಶೋಧನೆಗಳ ಪ್ರಕಾರ ಊಸರವಳ್ಳಿಗಳ ಚರ್ಮದಲ್ಲಿ ವಿಶೇಷ ಕೋಶಗಳಿದ್ದು ಅವು ವರ್ಣದ್ರವ್ಯಗಳನ್ನು ಹೊಂದಿದೆ. ಅದನ್ನು ಕ್ರೊಮೆಟೋಫೋರ (Chromatophores)ಎಂದು ಕರೆಯುತ್ತಾರೆ. ಇದರ ಮೊದಲ ಪದರ ಕೆಂಪು ಮತ್ತು ಹಳದಿ ವರ್ಣದ್ರವ್ಯವನ್ನು, ಕೆಳಪದರವು ನೀಲಿ ಹಾಗು ಬಿಳಿ ವರ್ಣದ್ರವ್ಯವನ್ನು ಹೊಂದಿದೆ. ಸಂದರ್ಭಕ್ಕೆ ತಕ್ಕಂತೆ ಮೆದುಳಿನಿಂದ ಕ್ರೊಮೆಟೋಫೋರ ಕೋಶಗಳಿಗೆ ಸಂದೇಶ ಬಂದಾಗ ವರ್ಣದ್ರವ್ಯಗಳು ಸಂಯೋಜನೆಗೊಂಡು ದೇಹದ ಬಣ್ಣ ಬದಲಾಗುತ್ತದೆ. ಇದಕ್ಕೆ ಮೆಲಾನಿನ್ (Melanin) ಎಂಬ ರಾಸಾಯನಿಕ ವಸ್ತುವೂ ಸಹ ಕಾರಣವಾಗುತ್ತದೆ. ಮೆಲಾನಿನ್ ಎಂಬುದು ಒಂದು ನಾರಿನ ಅಂಶವಾಗಿದ್ದು (Fiber) ಇದು ಜೇಡರ ಬಲೆಯಂತೆ ವರ್ಣದ್ರವ್ಯಗಳ ಮೇಲೆ ಹಾದು ಹೋಗಿರುತ್ತದೆ. ಇದು ಚರ್ಮದ ಗಾಢ ಬಣ್ಣಕ್ಕೆ ಕಾರಣವಾಗುತ್ತದೆ.




ಊಸರವಳ್ಳಿಯ ಈ ಬಣ್ಣ ಬದಲಾವಣೆ ಪರಿಸರದ ಹಾಗೂ ವಾತಾವರಣದ ಮೂಲಕ ವಿಕಸನಗೊಂಡಿದೆ. ಬೆಳಕಿನ ತೀಕ್ಷ್ಣತೆಯನ್ನು ಕಡಿಮೆ ಮಾಡಲು ಹಾಗು ದೇಹದ ಉಷ್ಣತೆಯನ್ನು ಸರಿದೂಗಿಸಲು ಬಣ್ಣ ಬದಲಿಸುತ್ತದೆ. ಉದಾಹರಣೆಗೆ, ಅತೀ ಶೀತವಾತಾವರಣದಲ್ಲಿ ಗಾಢ ಬಣ್ಣಕ್ಕೆ ತಿರುಗಿ ದೇಹವನ್ನು ಬೆಚ್ಚಗಿಟ್ಟುಕೊಳ್ಳುತ್ತದೆ ಮತ್ತು ಹೆಚ್ಚು ಬಿಸಿಲಿನ ವಾತಾವರಣವಿದ್ದಾಗ ದೇಹದ ಬಣ್ಣವನ್ನು ತಿಳಿಗೊಳಿಸಿಕೊಂಡು ಉಷ್ಣತೆಯನ್ನು ಕಡಿಮೆ ಮಾಡಿಕೊಳ್ಳುತ್ತದೆ. ಪರಿಸರ ವ್ಯವಸ್ಥೆಯ ಸಮತೋಲನದಲ್ಲಿ ಇವುಗಳು ಪ್ರಮುಖ ಪಾತ್ರ ವಹಿಸುತ್ತವೆ.

ಈ ಊಸರವಳ್ಳಿಯ ಬಗ್ಗೆ ಹಳ್ಳಿಯ ಜನರಲ್ಲಿ ಇದು ಅತ್ಯಂತ ವಿಷಕಾರಿ ಜೀವಿ, ಅಪಶಕುನದ ಪ್ರಾಣಿ, ಇದರಿಂದ ವಿಷ ತೆಗೆದು ಕೈ ಮದ್ದಿಗೆ ಬಳಸುವರು ಮತ್ತು ಏಳು ಊಸರವಳ್ಳಿಗಳನ್ನು ಸಾಯಿಸಿದರೆ ಒಂದು ದೇವಸ್ಥಾನ ಕಟ್ಟಿದ ಪುಣ್ಯ ಬರುತ್ತದೆಂಬ ಮೂಢನಂಬಿಕೆ ಇದೆ. ನಂಬಿಕೆ ತಪ್ಪಲ್ಲ ಆದರೆ ಮಾನವನ ಒಳಿತಿಗಾಗಿ ಇನ್ನೊಂದು ಜೀವಿಯ ಬದುಕನ್ನೇ ನಾಶ ಮಾಡುವ ಮೂಢನಂಬಿಕೆ ತಪ್ಪು. ಪ್ರಕೃತಿಯಲ್ಲಿ ಯಾವ ಜೀವಿಯೂ ಹೊಂದಿಲ್ಲದ ಅನೇಕ ವಿಶಿಷ್ಟ ಗುಣಗಳನ್ನು ಹೊಂದಿರುವ ಈ ಜೀವಿ ನಿಜಕ್ಕೂ ಪ್ರಕೃತಿಯ ಒಂದು ವಿಸ್ಮಯ. ಇಂತಹ ಜೀವಿಗಳಿಂದ ಪ್ರಕೃತಿಗೆ ಹಾನಿಗಿಂತ ಉಪಯೋಗವೇ ಹೆಚ್ಚು. ಇಂತಹ ಅಪರೂಪದ ಜೀವಿಗಳನ್ನು ನಾಶಮಾಡಿ ಚಿತ್ರಪಟದಲ್ಲಿ ನೋಡಿ ಆನಂದಿಸುವುದರ ಬದಲು ಪ್ರಕೃತಿಯ ನಡುವಿನಲ್ಲಿ ಅದರ ಸಹಜ ವರ್ತನೆಯನ್ನು ವೀಕ್ಷಿಸುವುದೇ ನಿಜಕ್ಕೂ ಒಂದು ಅದ್ಭುತ.

**ಲೇಖನ:** ಸೌಮ್ಯಾ ಅಭಿನಂದನ್ ಬೀಳೂರು
ಶಿವಮೊಗ್ಗ ಜಿಲ್ಲೆ






# ವಿಷಯು ಕಾರಿ, ಸಾಲಾಮಂಡರ್!

ಈ ಕೊರೋನಾ ವೈರಸ್ ತಂದಿರುವ ಉಪದ್ರುವದ ಫಲವಾಗಿ ಇಡೀ ಪ್ರಪಂಚವೇ ಒಮ್ಮೆ ನಿಂತು ನಾವು ಎತ್ತ ಸಾಗುತ್ತಿದ್ದೇವೆ ಎಂದು ಯೋಚಿಸುವ ಹಾಗಾಗಿದೆ. ಈಗ ವೈರಸ್ ನ ಜೊತೆ ಜೊತೆಗೇ ನಮ್ಮೆಲ್ಲರ ಬಾಳು ಎಳೆದುಕೊಂಡು ಸಾಗಬೇಕಿದೆ. ಈ ಮಾರಿಯಿಂದ  ಸಾವನ್ನಪ್ಪಿದವರ ಸಂಖ್ಯೆ ಲಕ್ಷಗಳ ಮೆಟ್ಟಿಲುಗಳು ಏರುತ್ತಲೇ ಇವೆ. ಇದನ್ನು ನಿಗ್ರಹಿಸುವ ಸಲುವಾಗಿ ನಮ್ಮ ಸರ್ಕಾರ ಲಾಕ್ ಡೌನ್ ನಂತಹ ದಾರಿಗಳ ಮೊರೆ ಹೋದರೂ ಕೊರೋನಾ ವೈರಸ್ ನ ಅಟ್ಟಹಾಸ ಹಾಗೇ ಇದೆ, ನೋಡಿದರೆ ಹೆಚ್ಚಾಗಿದೆ. ಈ ಲಾಕ್ ಡೌನ್ ಗಳು ಒಬ್ಬೊಬ್ಬರಿಗೆ ಒಂದೊಂದು ರೀತಿಯ ಪರಿಣಾಮ ಬೀರಿದೆ. ನನ್ನ ಮೇಲಿನ ಪರಿಣಾಮ ಕೊಂಚ ವಿಭಿನ್ನವಾಗೇ ಇದೆ.

ಹೇಗೆ…? ಎನ್ನುವ ಪ್ರಶ್ನೆ ಮೂಡಿದ್ದರೆ ನೀವು ನನ್ನ ಜೊತೆಯಲ್ಲೇ ಇದ್ದೀರೆಂದರ್ಥ, ಗುಡ್..

ಈ ಲಾಕ್ ಡೌನ್ ನ ಪ್ರತಿಫಲವಾಗಿ ನಮ್ಮ ಊರಿನ ಹಾಗೂ ನಗರದ ಸಂಪರ್ಕ ಸಂಪೂರ್ಣವಾಗಿ ಕಳೆದು ಹೋಯ್ತು. ಇದು ಒಂಥರಾ ಒಳ್ಳೆಯದೆ ಆಯಿತು. ಯಾಕೆ ಅನ್ನುತ್ತೀರಾ… ಲಾಕ್ ಡೌನ್ ಶುರುವಾದ ಮೇಲೆ ಪ್ರಾರಂಭದಲ್ಲಿ ಮಾಡಲು ಕೆಲಸಗಳು ಹೆಚ್ಚಿರಲಿಲ್ಲ. ನಮ್ಮ ಊರಿನ ಪಕ್ಕದಲ್ಲೇ ಕಾಡು-ಮೇಡು ಇದ್ದರೂ ಅದರ ಮೋಡಿ ಕಂಡಿರಲಿಲ್ಲ. ಈ ಸಮಯದಲ್ಲಿ ನಮಗೆ ಬೇರೆ ಏನೂ ತೋಚದೆ, ಈ ಕೊರೋನವೇ ನನಗೊದಗಿಸಿದ ಕೆಲವು ಹೊಸ ಸ್ನೇಹಿತರ ಜೊತೆ ನಮ್ಮ ಸುತ್ತಲಿನ ಪರಿಸರವನ್ನು ಕಣ್ ತೆರೆದು ನೋಡಲು ಅವಕಾಶ ದೊರಕಿತು. ಆಗಲೇ ತಿಳಿದದ್ದು ಇಷ್ಟು ದಿನ ಇವೆಲ್ಲಾ ಇದ್ದರೂ ನಾನೇ ನೋಡುವ ಮನಸ್ಸು ಮಾಡಿರಲಿಲ್ಲವೇ? ಅಥವಾ ಎಲ್ಲರಂತೇ ನಾನೂ ನನ್ನ ವೈಯಕ್ತಿಕ, ಅಷ್ಟು ಸಾರವಿಲ್ಲದ ದೈನಂದಿನ ಕೆಲಸಗಳಲ್ಲಿ ಮುಳುಗಿಹೋಗಿದ್ದೇನೆಯೇ? ಎಂದು.

ಹಾಗೇ ಸುಮಾರು ದಿನಗಳಿಂದ ಜಾಗ್ ಹೋಗಬೇಕೆಂದು ಮನಸ್ಸಲ್ಲೇ ಅಂದುಕೊಂಡು, ಬೆಳಿಗ್ಗೆ ಏಳಲಾಗದೆ, ಕನಸಲ್ಲೇ ಓಡಿ, ಸುಸ್ತಾಗಿ, ಬೆಳಿಗ್ಗೆ ತಡವಾಗಿ ಏಳುತ್ತಿದ್ದ ದಿನಗಳಲ್ಲಿ ಒಬ್ಬ ಒಳ್ಳೆ ಸ್ನೇಹಿತನಿಂದ ಅದೂ ನನಸಾಯಿತು. ಹೀಗೆ ಕೊರೋನಾ ದಿನಗಳ ನನ್ನ ಅನುಭವ ಹೊಸತಾಗಿತ್ತು. ಹೀಗೊಂದು ದಿನ ನಮ್ಮ ಹೊಸ ಸ್ನೇಹಿತರೊಡನೆ ಪಕ್ಕದಲ್ಲೇ ಇದ್ದ ಸಣ್ಣ ಗುಡ್ಡಕ್ಕೆ, ದೊಡ್ಡ ಮನಸ್ಸು ಮಾಡಿ ಹೊರಟಾಯಿತು. ಹೋಗುವಾಗ ಗುಯ್ ಎಂದು ಜೋರಾದ ಶಬ್ಧ... ಕಾಡಿನ ಬಳಿ ಗುಯ್ ಎನ್ನುವ ಶಬ್ಧ ಬಾರದೇ ಮೋಟಾರ್ ಸೈಕಲ್ ಶಬ್ಧ ಬರುವುದೇ? ಎಂದುಕೊಳ್ಳಬೇಡಿ, ಏಕೆಂದರೆ ಆ ಶಬ್ಧ ಸಾಮನ್ಯವಾಗಿ ಕಾಡಲ್ಲಿ ಕೇಳಲು ಸಿಗುವ ಶಬ್ಧವಾಗಿರಲಿಲ್ಲ, ಸ್ವಲ್ಪ ಜೋರಾಗೇ ಇತ್ತು. ಏನದು ಎಂದು ಹುಡುಕಿ ಆ ಶಬ್ಧಕ್ಕೆ ಹತ್ತಿರವಾಗುತ್ತಿದ್ದಂತೆಯೇ ಇದು ಕಪ್ಪೆಗಳ ಶಬ್ಧ ಎಂದು ತಿಳಿಯಿತು. ಆದರೆ ಹೇಗೆ ಇಷ್ಟು ಕಪ್ಪೆಗಳು ಒಮ್ಮೆಲೆ ಇಷ್ಟು ಶಬ್ಧ! ಎಂದುಕೊಂಡು ಒಂದೆರೆಡು ಹೆಜ್ಜೆ ಹಾಕುತ್ತಿದ್ದಂತೆ 'ಸುಮಾರು ದಿನಗಳ ನಂತರ ಮೊನ್ನೆಯಷ್ಟೇ ಮಳೆ ಬಂತಲ್ಲಾ ಮಾರಾಯ ಅದಕ್ಕೇ ಗುಂಪು ಹೊರ ಬಂದಿವೆ' ಎಂದು ನನ್ನ ಮೆದುಳೇ ಉತ್ತರಿಸಿತು. ಹತ್ತಿರ ಹೋಗಿ ನೋಡುತ್ತೇನೆ... ನಮ್ಮ ಊರಿನ ಜಾತ್ರೆಯ ಸಮಯದಲ್ಲೋ, ಮದುವೆ ನಂತರದ ಮರುಳಿ ಸಮಯದಲ್ಲೋ ಸೇರುವ ಜನರ ಹಾಗೆ ನೂರಾರು ಕಪ್ಪೆಗಳು ಒಂದೇ ಸಣ್ಣ ಕೊಳದಲ್ಲಿ ತೇಲಿಕೊಂಡು, ತಾವುಗಳು ಮಾಡುತ್ತಿರುವ ಶಬ್ಧವೇ ಸಂಗೀತವೆಂದು ತಿಳಿದುಕೊಂಡು ಕಿರಚುತ್ತಿದ್ದವು. ಶೀತರಕ್ತ ಉಭಯವಾಸಿಗಳಾದ ನಿಮಗೇ ಇಷ್ಟಿರುವಾಗ, ಬಿಸಿ ರಕ್ತ ಪ್ರಾಣಿ ನಾನು... ಎಂದು ಮನಸ್ಸಿನಲ್ಲೇ ನನ್ನ ಧ್ವನಿ ಯಾರಿಗೇನು ಕಡಿಮೆ ಎಂದು ಸಣ್ಣಗೆ ಹಾಡುತ್ತಾ ನಡೆದೆ.

ಉಭಯವಾಸಿ ಎಂದರೆ ನೆನಪಾಯಿತು, ಉಭಯವಾಸಿಗಳಿಗೆ ಇನ್ನೊಂದು ಉದಾಹರಣೆ ಸಾಲಾಮಂಡರ್, ತಿಳಿದಿದೆಯಲ್ಲವೇ? ತಿಳಿಯದೇ ಏನು, ತಿಳಿದಿರುತ್ತದೆ. ಆದರೂ ಗೊತ್ತಿಲ್ಲವೆಂದರೆ ಏನು ಮಾಡುವುದು? ಒಮ್ಮೆ ಗೂಗಲ್ ಅನ್ನು ಕೇಳಿಬಿಡಿ ಅಷ್ಟೇ. ವಿಷಯಕ್ಕೆ ಬಂದರೆ ಈ ಸಾಲಾಮಂಡರುಗಳಲ್ಲೇ ಹಲವಾರು ವಿಧಗಳಿವೆ. ಅದರಲ್ಲೇನು ವಿಶೇಷ? ಎನ್ನುತ್ತೀರಾ... ಅಲ್ಲೇ ಇರುವುದು, ಅಮೇರಿಕಾದ ಪಶ್ಚಿಮ ಭಾಗದಲ್ಲಿ ಸಿಗುವ ನ್ಯೂಟ್(newt) ಎಂದು ಕರೆಯಲ್ಪಡುವ ಈ ಸಾಲಾಮಂಡರ್, ವಿಷಕಾರಿಯಂತೆ!

ಓಹೋ ಹೌದೇನು... ಆದರೆ ನಮಗೆ ತಿಳಿದ ಹಾಗೆ ಕೆಲವು ಕಪ್ಪೆಗಳಲ್ಲೂ ವಿಷಕಾರಿಯಾಗಿರುವವು ನಮ್ಮಲ್ಲೇ ಇವೆ ಎಂದು ಹೇಳುವುದಾದರೆ ಮುಂದೆ ಓದಲು ಇನ್ನೂ ಸ್ವಾರಸ್ಯಕರವಾದ ವಿಷಯವಿದೆ ಬನ್ನಿ... ಈ ನ್ಯೂಟ್ ನ ಮೈ ಸ್ವಲ್ಪ ಒರಟಾಗಿದ್ದು ಒಂದು ಬಗೆಯ ಬ್ಯಾಕ್ಟೀರಿಯಾವನ್ನು ಹೊಂದಿದೆ. ಈ ಬ್ಯಾಕ್ಟೀರಿಯಾ ಟೆಟ್ರೊಡೋ ಟಾಕ್ಸಿನ್(Tetrodotoxin-TTX) ಎಂಬ ವಿಷಕಾರಿ ಕೆಮಿಕಲ್ ಅನ್ನು ಸ್ರವಿಸುತ್ತದೆ. ಇದು ಯಾವುದಾದರೂ ಪ್ರಾಣಿಯ ದೇಹದ ಒಳಗೆ ಸ್ವಲ್ಪ ಪ್ರಮಾಣದಲ್ಲಿ ಹೋದರೆ ದೇಹದ ಮಾಂಸಖಂಡಗಳನ್ನು ಮರಗಟ್ಟಿಸುವಂತೆ ಮಾಡುತ್ತವೆ. ಅದೇ ಕೆಮಿಕಲ್ ನ ಪ್ರಮಾಣ ಹೆಚ್ಚಾದರೆ ಸಾವೂ ಸಂಭವಿಸುತ್ತದೆ. ಒಂದು ನ್ಯೂಟ್ ನಲ್ಲಿ ಕೆಲವು ಮನುಷ್ಯರನ್ನು ಕೊಲ್ಲುವಷ್ಟು ವಿಷವಿರುತ್ತದೆ. ಆದರೆ ಈ ಪ್ರಾಣಿಯು



ಆ ಆಯುಧವನ್ನು ತಾನು ಯಾವುದೇ ಹಾವುಗಳಂತಹ ಪರಭಕ್ಷಕಗಳಿಗೆ ಆಹಾರವಾಗದೇ ಇರಲೆಂದು, ರಕ್ಷಣೆಗಾಗಿ ಬಳಸಿಕೊಂಡಿವೆ.

ಈ TTX ವಿಷವು ಕೇವಲ ಈ ನ್ಯೂಟ್ ನಂತಹ ಉಭಯವಾಸಿಗಳಲ್ಲಿ ಅಲ್ಲದೇ ಕೆಲವು ಜಲವಾಸಿಗಳಾದ ಆಕ್ಟೋಪಸ್, ಏಡಿ, ನಕ್ಷತ್ರ ಮೀನುಗಳಲ್ಲಿ ಸಹ ಸಿಗುತ್ತವೆ. ಪಫರ್ ಫಿಶ್ ಎಂಬ ಜಲವಾಸಿಯು TTX ಅನ್ನು ತಾನು ತಿನ್ನುವ ವಿಷಕಾರಕ ಆಹಾರದಿಂದ ಹಾಗೂ ತನ್ನ ಮೈ ಮೇಲೆ ಇರುವ ಬ್ಯಾಕ್ಟೀರಿಯಾದಿಂದ ಪಡೆಯುತ್ತವಂತೆ. ಆದರೆ ಈ ನ್ಯೂಟ್ ನ ಆಹಾರದಲ್ಲಿ ವಿಷಕಾರಿಯಾದ ಜೀವಿಗಳನ್ನು ತಿನ್ನುವ ಉದಾಹರಣೆಗಳಿಲ್ಲ. ಹಾಗೂ 2004ರಲ್ಲಿ ಬಂದಿದ್ದ ಒಂದು ವೈಜ್ಞಾನಿಕ ಲೇಖನದಲ್ಲಿ ನ್ಯೂಟ್ ಗಳ ಮೇಲೆ TTX ತಯಾರಿಸಬಹುದಾದ ಬ್ಯಾಕ್ಟೀರಿಯಾಗಳು ಇಲ್ಲ ಎಂದು ಹೇಳಲಾಗಿತ್ತು. ಇವೆಲ್ಲಾ ನೋಡಿದರೆ ಈ ನ್ಯೂಟ್ ಗಳೇ ಸ್ವತಃ ಈ ವಿಷಕಾರಿ ಕೆಮಿಕಲ್ ಅನ್ನು ತಯಾರಿಸುತ್ತಿವೆ ಎಂದು ಊಹಿಸುವುದು ಸಾಮಾನ್ಯ ವಿಜ್ಞಾನ. ಅಲ್ಲವೇ?

ಆದರೆ TTX ತಯಾರಿಸುವುದು ಅಷ್ಟು ಸುಲಭವಲ್ಲ. ಯಾಕೆಂದರೆ ಇದುವರೆಗೂ ಯಾವ ಪ್ರಾಣಿಯಲ್ಲೂ ಈ ರೀತಿಯ ಗುಣ ಇರದೇ, ಇದಕ್ಕೆ ಮಾತ್ರ ಇರುವುದು ಕಷ್ಟ ಸಾಧ್ಯ ಎಂದು ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ಜೀವ ವಿಜ್ಞಾನಿಯೊಬ್ಬರು ಅಭಿಪ್ರಾಯ ಪಟ್ಟಿದ್ದಾರೆ. ಹಾಗಾಗಿ ಇದನ್ನು ಇನ್ನೊಮ್ಮೆ ಪರೀಕ್ಷಿಯೇ ಬಿಡೋಣವೆಂದು, ಮಿಶಿಗನ್ ವಿಶ್ವವಿದ್ಯಾಲಯದ ವಿಜ್ಞಾನಿಯ ತಂಡವೊಂದು ನ್ಯೂಟ್ ನ ಮೈ ಮೇಲೆ ಸಿಗುವ ಎಲ್ಲಾ ಬ್ಯಾಕ್ಟೀರಿಯಾಗಳನ್ನು ಸಂಗ್ರಹಿಸಿ ಲ್ಯಾಬ್ ನಲ್ಲಿ ಬೆಳೆಸಿದರು. ನಂತರ ಅವುಗಳಲ್ಲಿ TTX ಉತ್ಪಾದಿಸಲು ಸಾಧ್ಯವಿರುವ ನಾಲ್ಕು ಬಗೆಯ ಬ್ಯಾಕ್ಟೀರಿಯಾಗಳನ್ನು ಗುರುತಿಸಿದರು. ಅದರಲ್ಲಿ *ಸುಡೋಮಾನಸ್* ಎಂಬ ಬಗೆಯ ಬ್ಯಾಕ್ಟೀರಿಯಾವೂ ಒಂದು. ಈ ಬ್ಯಾಕ್ಟೀರಿಯಾ ಸಮುದ್ರವಾಸಿಗಳಾದ ಕೆಲವು ಮೀನು, ಬಸವನ ಹುಳು ಮತ್ತು ಆಕ್ಟೋಪಸ್ ಗಳಲ್ಲಿ ಸಿಕ್ಕರೂ ನೆಲವಾಸಿ, ಒರಟು ಮೈ ನ ಈ ನ್ಯೂಟ್ ನಲ್ಲಿ ಸಿಕ್ಕಿರುವುದೇ ವಿಶೇಷ ಎನ್ನುತ್ತಾರೆ ವಿಜ್ಞಾನಿಗಳು.

ಹಾಗೆಂದ ಮಾತ್ರಕ್ಕೆ ನ್ಯೂಟ್ ಗಳು TTXಗಳನ್ನು ಉತ್ಪಾದಿಸಲು ಸಾಧ್ಯವೇ ಇಲ್ಲ ಎಂದು ಖಡಾಖಂಡಿತವಾಗಿ ಹೇಳಲಾಗುವುದಿಲ್ಲ. ಯಾಕೆಂದರೆ ಈ ನ್ಯೂಟ್ ನ ಮೈ ಮೇಲೆ ಇದಲ್ಲದೇ ಬೇರೆ ಬೇರೆ ತರಹದ ವಿಷಕಾರಿ ಕೆಮಿಕಲ್ ಗಳು ಸಿಕ್ಕಿವೆ. ಜೊತೆಗೆ ಈ ಸುಡೋಮಾನಸ್ ಬ್ಯಾಕ್ಟೀರಿಯಾಗಳು ಹೇಗೆ ಈ TTXಅನ್ನು ತಯಾರಿಸುತ್ತವೆ ಎನ್ನುವುದು ಇದುವರೆಗೆ ತಿಳಿದಿಲ್ಲ. ಇವೆಲ್ಲಾ ನೋಡಿದರೆ ನನಗಂತೂ ಹೀಗೆನ್ನಿಸುತ್ತದೆ, ನಮ್ಮ ವಿಜ್ಞಾನ ಎಷ್ಟೇ ಮುಂದುವರೆದರೂ, ಹೊಸ ವಿಚಾರಗಳ ಅನಾವರಣ ಮಾಡಿದರೂ, ಎಲ್ಲರ ಹುಬ್ಬೇರಿಸಿದ್ದರೂ ಕೆಲವು ವಿಷಯಗಳು... ಇಲ್ಲ ಇಲ್ಲಾ... ಎಷ್ಟೋ ವಿಷಯಗಳು ಪ್ರಶ್ನಾರ್ಥಕ ಚಿಹ್ನೆಗಳಾಗಿಯೇ ಉಳಿಯುತ್ತವೆ! ನಮ್ಮೆಲ್ಲಾ ಈ ಹೊಸ ಸಂಶೋಧನೆಗಳು, ವಿಜ್ಞಾನವೆಂಬ ವಾಹನದ ಒಳಗೆ ಕೂತು ಅಚ್ಚರಿಯ ದಾರಿಯಲ್ಲಿ ಸಾಗುತ್ತಿರುವ ನಮಗೆ ಸಿಗುವ ಒಂದು ಮೈಲಿಗಲ್ಲು ಅಷ್ಟೆ. ಮುಂದೆ ಬರಬಹುದಾದ ಮೈಲಿಗಲ್ಲುಗಳ ದೊಡ್ಡ ಸಾಲೇ ಇದೆ. ವಿಜ್ಞಾನದ ವಾಹನಕ್ಕೆ ನಮ್ಮ ಮೆದುಳಿನ ನ್ಯೂರಾನ್ ಗಳ ಮಧ್ಯೆ ಉದ್ಭವಿಸುವ ಈ ಪ್ರಶ್ನಾರ್ಥಕಗಳೇ ಇಂಧನ!



- **ಜೈಕುಮಾರ್ ಆರ್.**
ಡಬ್ಲ್ಯೂ.ಸಿ.ಜಿ. ಬೆಂಗಳೂರು

# ಮೂಕ ಪ್ರಾಣಿಗಳು
# ಅದು ಎಷ್ಟೋ ವಾಸಿ

ಮರಗಿಡಗಳನು ಧರೆಗುರುಳಿಸಿ
ಹಸಿರು ಕಾಡನು ಅಳಿಸಿ
ಕಾಂಕ್ರೀಟ್ ಕಾಡನು ಬೆಳೆಸಿ
ಭೂಮಿಯ ತಾಪಮಾನ ಹೆಚ್ಚಿಸಿ
ಬಳಿಯುತಿಹನು ಪರಿಸರಕ್ಕೆ ಮಸಿ
ದುರುಳ ಮನುಜ ಸಂಭ್ರಮ
ಆಚರಸಿ ಕುಣಿದು ಕುಪ್ಪಳಿಸಿ!

ಕೈಗಾರಿಕೆ ನಿರ್ಮಿಸಿ ಬೆಳಸಿ
ಅವುಗಳಿಂದ ವಿಷ ಅನಿಲಗಳು
ಹೊರ ಸೂಸಿ ಎಲ್ಲೆಡೆ ಹರಡಿಸಿ
ವಾಯು ಪ್ರದೂಷಣೆಗೊಳಿಸಿ
ಬಳಿಯುತಿಹನು ಪರಿಸರಕ್ಕೆ ಮಸಿ
ದುರುಳ ಮನುಜ ಸಂಭ್ರಮ
ಆಚರಸಿ ಕುಣಿದು ಕುಪ್ಪಳಿಸಿ!

ರಾಸಾಯನಿಕಗಳ ಬಳಿಸಿ
ಸರೋವರ ನದಿಗಳಿಗೂ ಬೆರೆಸಿ
ಜೀವಜಲ ಮಲಿನಗೊಳಿಸಿ
ಜಲಚರಗಳನ್ನು ಸಾಯಿಸಿ
ಬಳಿಯುತಿಹನು ಪರಿಸರಕ್ಕೆ ಮಸಿ
ದುರುಳ ಮನುಜ ಸಂಭ್ರಮ
ಆಚರಸಿ ಕುಣಿದು ಕುಪ್ಪಳಿಸಿ!

ತ್ಯಾಜ್ಯ ಪ್ಲಾಸ್ಟಿಕ್ ಗಳನ್ನು
ಹೆಚ್ಚು ಹೆಚ್ಚು ಉತ್ಪಾದಿಸಿ
ಮನಬಂದಂತೆ ಉಪಯೋಗಿಸಿ
ಮಣ್ಣಿನ ನೈರ್ಮಲ್ಯ ಕುಂದಿಸಿ
ಬಳಿಯುತಿಹನು ಪರಿಸರಕ್ಕೆ ಮಸಿ
ದುರುಳ ಮನುಜ ಸಂಭ್ರಮ
ಆಚರಿಸಿ ಕುಣಿದು ಕುಪ್ಪಳಿಸಿ!

ಕಾಡನು ಉಳಿಸುವ ನಾಡನು ಬೆಳಸುವ
ಎಂದು ನುಡಿಯುತಲೆ ಬಣ್ಣ ಬಣ್ಣದ ಹುಸಿ
ವಿಶ್ವ ಪರಿಸರ ದಿನ ನೆಪ ಮಾತ್ರಕೆ ನಡೆಸಿ
ಬಳಿಯುತಿಹನು ಪರಿಸರಕ್ಕೆ ಮಸಿ
ದುರುಳ ಮನುಜ ಸಂಭ್ರಮ
ಆಚರಿಸಿ ಕುಣಿದು ಕುಪ್ಪಳಿಸಿ
ಇವನ ಮುಂದೆ ಮೂಕ ಪ್ರಾಣಿಗಳು
ಅದು ಎಷ್ಟೋ ವಾಸಿ ಅದು ಎಷ್ಟೋ ವಾಸಿ !

- ವಿಜಯ್ ಕುಮಾರ್ ಎಚ್. ಕೆ.
ರಾಯಚೂರು ಜಿಲ್ಲೆ

# ಪ್ರಕೃತಿ ಬಿಂಬ



**ಚಿತ್ರ ಪಕ್ಷಿ** © ಮೊಹಮ್ಮದ್ ಮನ್ಸೂರ್

ಚಿತ್ರ ಪಕ್ಷಿಗಳು ದಕ್ಷಿಣ ಏಷ್ಯಾದ ಭಾರತ ಹಾಗು ಇಂಡೋನೇಷ್ಯಾದವರೆಗು ಕಂಡುಬರುತ್ತದೆ. ಸಣ್ಣ ಚಿತ್ರ ಪಕ್ಷಿಗಳು ಗಾಢ ಕಪ್ಪು ಬಣ್ಣದ ಕೊಕ್ಕಿನೊಂದಿಗೆ ಉದ್ದನೆಯ ಕಪ್ಪು ರೆಕ್ಕೆಯನ್ನು ಹೊಂದಿದೆ. ಗಂಡು ಪಕ್ಷಿಯ ಮೇಲ್ಭಾಗವು ಕಪ್ಪು ಮಿಶ್ರಿತ ಬೂದು ಬಣ್ಣದಿಂದ ಕೂಡಿದ್ದು ಕುತ್ತಿಗೆಯ ಭಾಗವು ಕಿತ್ತಳೆ ಬಣ್ಣ ಹೊಂದಿದೆ ಹಾಗೂ ಹೊಟ್ಟೆಯಿಂದ ಕೆಳ ಭಾಗಕ್ಕೆ ತೆಳು ಹಳದಿ ಬಣ್ಣ ಕಂಡುಬರುತ್ತದೆ. ಹೆಣ್ಣು ಪಕ್ಷಿಗಳು ಸಂಪೂರ್ಣ ಬೂದು ಬಣ್ಣದಿಂದ ಕೂಡಿದ್ದು ಬಾಲದ ಅಂಚು ತೆಳು ಹಳದಿ ಇರುತ್ತದೆ. ಇವುಗಳು ಸಣ್ಣ ಕಾಡುಗಳ ಪೊದೆಗಳಲ್ಲಿ ಒಂದು ಬಟ್ಟಲಿನಂತಹ ಗೂಡನ್ನು ನಿರ್ಮಿಸಿ ಮಚ್ಚೆಇರುವ 2-4 ಮೊಟ್ಟೆಗಳನ್ನಿಟ್ಟು ಹೆಣ್ಣು ಮಾತ್ರ ಕಾವು ಕೊಟ್ಟು ಮರಿಮಾಡುತ್ತದೆ. ಆಹಾರವನ್ನಾಗಿ ಮರಗಳಲ್ಲಿ ಕೀಟಗಳನ್ನು ಹಾಗು ಹಾರಾಡುವ ಕೀಟಗಳನ್ನು ಹಾರುತ್ತಲೆ ಹಿಡಿದು ತಿನ್ನುತ್ತವೆ. ಚಿತ್ರ ಪಕ್ಷಿಗಳ ಕರೆಯು ಸ್ವೀ.. ಸ್ವೀ.. ಸ್ವೀ.. ಸ್ವೀ.. ಎಂಬಂತಿರುತ್ತದೆ.



**ಉದ್ದ-ಬಾಲದ ಶ್ರೈಕ್** © ಮೊಹಮ್ಮದ್ ಮನ್ಸೂರ್

ಏಷ್ಯಾದಾದ್ಯಂತ ವ್ಯಾಪಕವಾಗಿ ವಿತರಿಸಲ್ಪಟ್ಟಿರುವ ಉದ್ದನೆಯ ಬಾಲದ ಶ್ರೈಕ್-ಗಳನ್ನು ರೂಫಸ್-ಬ್ಯಾಕ್ಡ್ ಶ್ರೈಕ್ ಎಂದೂ ಸಹ ಕರೆಯಲಾಗುತ್ತದೆ. ಉದ್ದನೆಯ ಬಾಲದ ಶ್ರೈಕ್ ಒಂದು ವಿಶಿಷ್ಟವಾದ ಶ್ರೈಕ್ ಆಗಿದೆ. ಇದು ಒಣ, ತೆರೆದ ಆವಾಸಸ್ಥಾನಗಳಿಗೆ ಅನುಕೂಲಕರವಾಗಿದೆ ಮತ್ತು ಪೊದೆಯ ಮೇಲೆ ಅಥವಾ ತಂತಿಯ ಮೇಲೆ ಪ್ರಮುಖವಾಗಿ ಕಾಣಸಿಗುತ್ತವೆ. ಇದರ ಕಣ್ಣಿನ ಸುತ್ತ ಇರುವ ಕಪ್ಪು ಮಚ್ಚೆಯು ನೋಡಲು ಆಕರ್ಷವಾಗಿದೆ. ಇವುಗಳ ಉಪ ಜಾತಿಗಳಲ್ಲಿ ಕಪ್ಪು ಬಣ್ಣವು ಕೆಲವು ಪಕ್ಷಿಗಳಿಗೆ ಹಣೆಯಮೇಲಿದ್ದರೆ ಇನ್ನು ಕೆಲವು ಸಂಪೂರ್ಣ ಕಪ್ಪು ತಲೆಯನ್ನು ಹೊಂದಿರುತ್ತವೆ. ಆಹಾರವನ್ನಾಗಿ ಹಲ್ಲಿಗಳು, ದೊಡ್ಡ ಕೀಟಗಳು, ಸಣ್ಣ ಪಕ್ಷಿಗಳು ಮತ್ತು ಇಲಿಗಳಂಥವುಗಳನ್ನು ತಿನ್ನುತ್ತವೆ. ಸಾಮಾನ್ಯವಾಗಿ ಒಂಟಿಯಾಗಿ ಅಥವ ಜೋಡಿಯಾಗಿ ಕಂಡು ಬರುವ ಇವುಗಳು ಗುಂಪಿನಲ್ಲಿರುವುದನ್ನು ಬಯಸುವುದಿಲ್ಲ. ಇದರ ಸಂತಾನೋತ್ಪತ್ತಿ ಕಾಲವು ಸಮಶೀತೋಷ್ಣ ವ್ಯಾಪ್ತಿಯಲ್ಲಿ ಬೇಸಿಗೆಯಲ್ಲಿರುತ್ತದೆ. ಗೂಡು ಆಳವಾದ ಮತ್ತು ಸಡಿಲವಾದ ಬಟ್ಟಲಿನಾಕಾರದಲ್ಲಿದ್ದು, ಇದು ಮುಳ್ಳಿನ ಕೊಂಬೆಗಳು, ಚಿಂದಿ ಮತ್ತು ಕೂದಲಿನಿಂದ ಕೂಡಿದೆ. ಸುಮಾರು ಮೂರರಿಂದ ಆರು ಮೊಟ್ಟೆಗಳನ್ನಿಟ್ಟು, ಎರಡೂ ಲಿಂಗಗಳಿಂದ ಕಾವುಕೊಡುತ್ತದೆ. ಮರಿಗಳು ಸುಮಾರು ಹದಿಮೂರರಿಂದ ಹದಿನಾರು ದಿನಗಳ ನಂತರ ಮೊಟ್ಟೆಯಿಂದ ಹೊರಬರುತ್ತವೆ. ಎಳೆಯ ಮರಿಗಳಿಗೆ ಹೆಚ್ಚಾಗಿ ಸೆರೆಹಿಡಿದ ಸಣ್ಣ ಪಕ್ಷಿಗಳ ತುಂಡುಗಳನ್ನು ನೀಡಲಾಗುತ್ತದೆ.



**ಸಿರ್ಕೀರ್ ಮಲ್ಕೊಹ** © ವೊಹಮ್ಮದ್ ಮನ್ಸೂರ್

ಸಿರ್ಕೀರ್ ಮಲ್ಕೊಹವು ಅಥವಾ ಸಿರ್ಕೀರ್ ಕೋಗಿಲೆ ಈ ಪಕ್ಷಿಯು ನಮ್ಮ ಭಾರತದ ಒಣ ಕಾಡುಗಳಲ್ಲಿ ಕಂಡುಬರುತ್ತದೆ. ಕಂದುಬಣ್ಣದ ದೇಹದೊಂದಿಗೆ ಆಕರ್ಷಿತ ಕೆಂಪುಬಣ್ಣದ ಕೊಕ್ಕಿನ ತುದಿಯಲ್ಲಿ ಹಳದಿಬಣ್ಣವನ್ನು ಹೊಂದಿದೆ. ಮಲ್ಕೊಹಗಳು ಕಲ್ಲು ಬಂಡೆಗಳು, ಪೊದೆಗಳ ನಡುವೆ ಮತ್ತು ನೆಲದ ಮೇಲೆ ಕಾಣಸಿಗುತ್ತವೆ. ಇವುಗಳು ಆಹಾರವನ್ನಾಗಿ ಸಣ್ಣ ಹಲ್ಲಿಗಳು, ಕೀಟಗಳು, ಕೆಲವೊಮ್ಮೆ ಹಣ್ಣುಗಳು ಮತ್ತು ಬೀಜಗಳನ್ನೂ ಸಹ ಸೇವಿಸುತ್ತವೆ. ಹೆಚ್ಚಾಗಿ ಮೌನವಾಗಿರುವ ಇವುಗಳಲ್ಲಿ ಗಂಡು ಮತ್ತು ಹೆಣ್ಣು ಒಂದೇ ಬಗೆಯ ಬಣ್ಣವನ್ನು ಹೊಂದಿರುತ್ತವೆ. ಸಿರ್ಕೀರ್ ಕೋಗಿಲೆಗಳು ಇತರ ಕೋಗಿಲೆಗಳಂತೆ ಪರಾವಲಂಬಿ ಅಲ್ಲ, ತೆಳು ಹಳದಿ ಮಿಶ್ರಿತ ಕಂದು ಬಣ್ಣದ 2-3 ಮೊಟ್ಟೆಗಳನ್ನು ಮಾರ್ಚ್ ನಿಂದ ಆಗಸ್ಟ್ ವರೆಗಿನ ತನ್ನ ಸಂತಾನೋತ್ಪತ್ತಿ ಸಮಯದಲ್ಲಿಟ್ಟು, ಗಂಡು ಮತ್ತು ಹೆಣ್ಣು ಎರಡೂ ಸಹ ಕಾವುಕೊಡುತ್ತವೆ. ಇವುಗಳು ಭಾರತವನ್ನು ಹೊರತುಪಡಿಸಿ ಬಾಂಗ್ಲಾದೇಶ, ಶ್ರೀಲಂಕಾ ಮತ್ತು ಪಾಕಿಸ್ತಾನದಲ್ಲಿಯೂ ಸಹ ಕಂಡುಬರುತ್ತವೆ.



**ಕಿರು ಮಿಂಚುಳ್ಳಿ** © ವೊಹಮ್ಮದ್ ಮನ್ಸೂರ್

ಗುಬ್ಬಚ್ಚಿ ಗಾತ್ರದ ಕಿರು ಮಿಂಚುಳ್ಳಿಯು ವಿಶಿಷ್ಟವಾದ ಸಣ್ಣ-ಬಾಲ, ದೊಡ್ಡ-ತಲೆಯನ್ನು ಹೊಂದಿದೆ. ಇದರ ಮೇಲ್ಭಾಗವು ನೀಲಿ ಬಣ್ಣದಿಂದಿದ್ದು, ಕೆಳಭಾಗವು ಕಿತ್ತಳೆ ಬಣ್ಣದಿಂದ ಕೂಡಿರುತ್ತದೆ ಮತ್ತು ಉದ್ದವಾದ ಕಪ್ಪು ಕೊಕ್ಕನ್ನು ಹೊಂದಿದೆ. ಇದು ಮುಖ್ಯವಾಗಿ ಆಹಾರವನ್ನಾಗಿ ಮೀನನ್ನು ಅವಲಂಬಿಸಿದೆ, ಡೈವಿಂಗ್ ನಿಂದ ನೀರಿನ ಅಡಿಯಲ್ಲಿ ಬೇಟೆಯನ್ನು ನೋಡಲು ಸಾಧ್ಯವಾಗುವಂತಹ ವಿಶೇಷ ದೃಶ್ಯದ ರೂಪಾಂತರಗಳನ್ನು ಹೊಂದಿದೆ. ಹೊಳೆಯುವಂತಹ 4-10 ಬಿಳಿ ಮೊಟ್ಟೆಗಳನ್ನು ನದಿಯ ದಂಡೆಯ ಮಣ್ಣಿನ ಗೋಡೆಯಲ್ಲಿ ಸಣ್ಣ ರಂಧ್ರಮಾಡಿ ಇಡುತ್ತವೆ. ಸುಮಾರು ಇಪ್ಪತ್ತು ದಿನಗಳ ಕಾಲದ ಕಾವಿನಿಂದ ಮೊಟ್ಟೆಯಿಂದ ಹೊರಬರುವ ಮರಿಗಳು, ಮುಂದಿನ ಇಪ್ಪತ್ನಾಲ್ಕು ದಿನಗಳ ಕಾಲ ಗೂಡಿನಲ್ಲೇ ಆಶ್ರಯ ಪಡೆದಿರುತ್ತವೆ. ನೀರಿನಿಂದ ಒಂದೆರಡು ಮೀಟರ್ ಎತ್ತರದಲ್ಲೇ ಬೇಟೆಗಾಗಿ ಕಾಯುವ ಇವುಗಳು ಕ್ಷಣ ಮಾತ್ರದಲ್ಲೇ ಮೀನನ್ನು ಅಪಹರಿಸುತ್ತವೆ.

**ಛಾಯಾಚಿತ್ರ:** ವೊಹಮ್ಮದ್ ಮನ್ಸೂರ್
**ಲೇಖನ:** ಧನರಾಜ್ ಎಂ.

# ನೀವೂ ಕಾನನಕ್ಕೆ ಬರೆಯಬಹುದು




ರಾಷ್ಟ್ರೀಯ ಜೇನುಹುಳುಗಳ ದಿನ ಆಗಸ್ಟ್ 22

ಜೀವಿಗಳ ಜೀವನದ ಮೂಲಾಧಾರ ಆಹಾರ. ಪ್ರತಿಯೊಂದು ಜೀವಿಯು ಆಹಾರಕ್ಕಾಗಿ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಸಸ್ಯಗಳ ಮೇಲೆ ಅವಲಂಬಿತವಾಗಿರುತ್ತದೆ. ನಾವು ತಿನ್ನುವ ಶೇಕಡಾ ಎಪ್ಪತ್ತರಷ್ಟು ಬೆಳೆಗಳು ಬೆಳೆಯಲು ಮೂಲ ಕಾರಣ ಕೆಲವು ಪರಿಸರಸ್ನೇಹಿ ಕೀಟಗಳು. ಇವುಗಳಲ್ಲಿ ಜೇನುನೊಣಗಳು ಅಗ್ರ ಸ್ಥಾನ ಪಡೆಯುತ್ತವೆ. ಜೇನುನೊಣಗಳಿಗೆ ಸುಮಾರು ನೂರು ಮಿಲಿಯನ್ ವರ್ಷಗಳ ಇತಿಹಾಸವಿದ್ದು, ವಿಶ್ವದಲ್ಲಿ ಇಪ್ಪತ್ತು ಸಾವಿರಕ್ಕೂ ಹೆಚ್ಚಿನ ಪ್ರಬೇಧಗಳಿವೆ. ಜೇನುಹುಳುಗಳು ತಮ್ಮ ಮರಿಗಳ ಆಹಾರಕ್ಕಾಗಿ ಹೂವಿಂದ ಹೂವಿಗೆ ಹಾರಿ ಮಕರಂದವನ್ನು ಸಂಗ್ರಹಿಸುತ್ತವೆ, ಹೀಗೆ ಮಾಡುವಾಗ ತಮಗೆ ಅರಿವಿಲ್ಲದೆ ಸಸ್ಯಗಳ ಪರಾಗ ಕಣಗಳನ್ನು ವಿತರಿಸಿ ಸಸ್ಯಗಳ ಸಂತಾನೋತ್ಪತ್ತಿಗೆ ನೆರವಾಗುವುದರೊಂದಿಗೆ ಅನೇಕ ಜೀವಿಗಳಿಗೆ ಆಹಾರವನ್ನು ಒದಗಿಸುತ್ತದೆ.

ಜೇನ್ನೊಣಗಳು ಗೂಡು ಕಟ್ಟುವ ಕಲೆ ಮತ್ತು ಗುಂಪಿನಲ್ಲಿ ಕೆಲಸ ಮಾಡುವ ವಿಧಾನ, ಆಹಾರ ಹುಡುಕುವಾಗ ಮಾಡುವ ವಿಶಿಷ್ಟ ನೃತ್ಯ ಎಲ್ಲವೂ ವಿಸ್ಮಯ ಮತ್ತು ಕುತೂಹಲ. ನೈಸರ್ಗಿಕವಾಗಿ ಸಿಗುವ ಸಿಹಿ ಪದಾರ್ಥ ಮತ್ತು ಹೆಚ್ಚು ಶತಮಾನಗಳವರೆಗೂ ಕೆಡದಂತೆ ಸಂರಕ್ಷಿಸಬಹುದಾದ ಜೇನಿಗೆ ಹೆಚ್ಚು ಬೇಡಿಕೆಯಿದ್ದು ಇದರಲ್ಲಿರುವ ಔಷಧಿಗಳಿಗಾಗಿ, ಜೇನು ಸಾಗಾಣಿಕೆಯನ್ನು ಅನೇಕರು ವಾಣಿಜ್ಯೋದ್ಯಮವಾಗಿಸಿಕೊಂಡಿದ್ದಾರೆ. ಪರಿಸರ ವ್ಯವಸ್ಥೆಯಲ್ಲಿ ಸಮತೋಲನವನ್ನು ಕಾಪಾಡುವಲ್ಲಿ ಮುಖ್ಯ ಪಾತ್ರವಹಿಸುವ ಜೇನುನೊಣಗಳು ಅನೇಕ ಕಾರಣಗಳಿಂದ ನಾಶವಾಗುತ್ತಿವೆ. ಅವುಗಳ ಆವಾಸಗಳ ನಾಶ, ಕೀಟನಾಶಕಗಳ ಬಳಕೆ, ಜಾಗತಿಕ ತಾಪಮಾನ ಏರಿಕೆಗಳು ಮುಖ್ಯ ಕಾರಣವೆಂದು ತಜ್ಞರು ಊಹಿಸಿದ್ದಾರೆ. ಜೇನುನೊಣಗಳ ಸಂರಕ್ಷಣೆಯ ಬಗ್ಗೆ ಅರಿವು ಮೂಡಿಸಲು ಆಗಸ್ಟ್ 22 ರಾಷ್ಟ್ರೀಯ ಜೇನುಹುಳುಗಳ ದಿನವನ್ನಾಗಿ ಆಚರಿಸಲಾಗುತ್ತದೆ.

ಹಾಗಾಗಿ ನೀವು ಬರೆದ ಪರಿಸರ ಲೇಖನಗಳು ಹಾಗೂ ಕವನಗಳನ್ನು ನಮ್ಮ ಈ ಇ-ಮಾಸಿಕಕ್ಕೆ ಆಗಸ್ಟ್ 15ರ ಒಳಗಾಗಿ ಈ ಕೆಳಗಿನ ವಿಳಾಸಕ್ಕೆ ಅಥವಾ ನಮ್ಮ ಇ ಮೇಲ್ ವಿಳಾಸಕ್ಕೆ ಕಳುಹಿಸಿಕೊಡಿ.

kaanana.mag@gmail.com

ಅಥವಾ Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ :560083. ಗೆ ಕಳಿಸಿಕೊಡಬಹುದು.